


ಅಧ್ಯಯನಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – 583276


2015–16ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ
ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# "ಆಧುನಿಕ ಕನ್ನಡದ ಪ್ರಾತಿನಿಧಿಕ ಪರಿಸರ ಕಥನಗಳ ಅಧ್ಯಯನ"


ನಿಬಂಧಕಾರರು

**ಎಂ.ಡಿ. ಗೋವಿಂದರಾಜು**

ನೋಂದಣಿ ಸಂಖ್ಯೆ : KVTM/K 150901030045

ಕನ್ನಡ ಎಂ.ಫಿಲ್ ವಿದ್ಯಾರ್ಥಿ (ಹಂಪಿ ಕ.ವಿ.ವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಗಣೇಶ**

ಕನ್ನಡ ಸಹಾಯಕ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕೃಷ್ಣರಾಜನಗರ, ಮೈಸೂರು ಜಿಲ್ಲೆ

**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**

**ಜಯಲಕ್ಷ್ಮೀಪುರಂ, ಮೈಸೂರು**




**2015–16**





## ಅಧ್ಯಯನಾಂಗ
## ಕನ್ನಡ ವಿಶ್ವವಿದ್ಯಾಲಯ, ಹಂಪಿ
## ವಿದ್ಯಾರಣ್ಯ – 583276

**2015–16ನೆಯ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ**

# "ಆಧುನಿಕ ಕನ್ನಡದ ಪ್ರಾತಿನಿಧಿಕ ಪರಿಸರ ಕಥನಗಳ ಅಧ್ಯಯನ"

ನಿಬಂಧಕಾರರು

**ಎಂ.ಡಿ. ಗೋವಿಂದರಾಜು**

ನೋಂದಣಿ ಸಂಖ್ಯೆ : KVTM/K 150901030045

ಕನ್ನಡ ಎಂ.ಫಿಲ್ ವಿದ್ಯಾರ್ಥಿ (ಹಂಪಿ ಕ.ವಿ.ವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಗಣೇಶ**

ಕನ್ನಡ ಸಹಾಯಕ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕೃಷ್ಣರಾಜನಗರ, ಮೈಸೂರು ಜಿಲ್ಲೆ

**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**

**ಜಯಲಕ್ಷ್ಮೀಪುರಂ, ಮೈಸೂರು**

**2015–16**

# ಮಾರ್ಗದರ್ಶಕರ ಪ್ರಮಾಣಪತ್ರ

೨೦೧೫-೧೬ನೆಯ ಸಾಲಿನಲ್ಲಿ ಕ್ರಮ ಸಂಖ್ಯೆ: KVTM/K 150901030045ರ ಹಂಪಿ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ **ಎಂ.ಡಿ. ಗೋವಿಂದರಾಜು** ಅವರು ನನ್ನ ಮಾರ್ಗದರ್ಶನದಲ್ಲಿ **"ಆಧುನಿಕ ಕನ್ನಡದ ಪ್ರಾತಿನಿಧಿಕ ಪರಿಸರ ಕಥನಗಳ ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಯಾವುದೇ ತತ್ಸಮಾನ ಪರೀಕ್ಷೆಗಳಿಗಾಗಿ ಯಾವ ವಿಶ್ವವಿದ್ಯಾಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು
ದಿನಾಂಕ: ೨೧-೦೭-೨೦೧೬

**(ಡಾ. ಗಣೇಶ)**
ಕನ್ನಡ ಸಹಾಯಕ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕೃಷ್ಣರಾಜನಗರ, ಮೈಸೂರು ಜಿಲ್ಲೆ

## ಅಭ್ಯರ್ಥಿಯ ಘೋಷಣಾ ಪತ್ರ

**"ಆಧುನಿಕ ಕನ್ನಡದ ಪ್ರಾತಿನಿಧಿಕ ಪರಿಸರ ಕಥನಗಳ ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಹಂಪಿ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್ ಪದವಿಯ ಕ್ರಮ ಸಂಖ್ಯೆ: KVTM/K 150901030045ರ ವಿದ್ಯಾರ್ಥಿಯಾದ ನಾನು ೨೦೧೫-೧೬ನೆಯ ಸಾಲಿನ ಪರೀಕ್ಷೆಗಾಗಿ **ಡಾ. ಗಣೇಶ, ಕನ್ನಡ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೃಷ್ಣರಾಜನಗರ, ಮೈಸೂರುಜಿಲ್ಲೆ** ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ತತ್ಸಮಾನ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

M.D. G-Raju

ಮೈಸೂರು
ದಿನಾಂಕ: ೨೧-೦೭-೨೦೧೬

**(ಎಂ.ಡಿ. ಗೋವಿಂದರಾಜು)**
೨೦೧೫-೧೬ನೆಯ ಸಾಲಿನ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

# "ಆಧುನಿಕ ಕನ್ನಡದ ಪ್ರಾತಿನಿಧಿಕ ಪರಿಸರ ಕಥನಗಳ ಅಧ್ಯಯನ"

## ವಿಷಯಸೂಚಿ



*****

# ಅಧ್ಯಾಯ – ೧

# ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶ

ಕನ್ನಡ ಸಾಹಿತ್ಯವು ಭಾರತೀಯ ಸಾಹಿತ್ಯದ ಇತಿಹಾಸದಲ್ಲಿ ಒಂದು ಮಹತ್ವಪೂರ್ಣ ಸ್ಥಾನವನ್ನು ಅಲಂಕರಿಸಿದೆ. ಹಾಗೆಯೇ ವಿವಿಧ ಭಾಷಾ ಸಾಹಿತ್ಯಕ್ಕೆ ಮಾದರಿಯಾಗಿದೆ. ಪ್ರಾಚೀನ ಕಾಲದಿಂದ ಇಂದಿನವರೆಗೂ ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ಆದ ವಿಶಿಷ್ಟ ಆಯಾಮಗಳಲ್ಲಿ ಈ ಸಾಹಿತ್ಯ ತೆರೆದುಕೊಂಡು ವಿಕಾಸ ಹೊಂದಿದೆ. ಉದ್ದಕ್ಕೂ ಅದು ಜೀವಪರವಾದ ಮೌಲ್ಯಗಳನ್ನು ವೈಜ್ಞಾನಿಕ ಹಾಗೂ ವೈಚಾರಿಕ ಪ್ರಜ್ಞೆಯ ನೆಲೆಯಲ್ಲಿ ತಿಳಿಸುತ್ತಾ ಬಂದಿದೆ. ಸರಳವಾದ ಅರ್ಥದಲ್ಲಿ ಸಾಹಿತ್ಯವೆಂದರೆ ಅದೊಂದು ಭಾಷೆಯ ಮೂಲಕ ಪ್ರಸಾರಗೊಳ್ಳುವ ಅಭಿವ್ಯಕ್ತಿ. ಅದನ್ನೇ ರಂ.ಶ್ರೀ. ಮುಗಳಿ ಅವರು ರಸಾನುಭವಗಳ ಸುಂದರವಾದ ಅಭಿವ್ಯಕ್ತಿಯೇ ಸಾಹಿತ್ಯ ಎಂದಿದ್ದಾರೆ.

ಯಾವುದೇ ಜನಸಮುದಾಯದ ವಿಶೇಷ ಸಾಮರ್ಥ್ಯವುಳ್ಳ ಚೇತನಗಳು ತಮ್ಮ ಅನುಭವದ ಪ್ರಾಮಾಣಿಕತೆ, ಪರಂಪರೆಯ ಗಾಢ ಅರಿವು ಮತ್ತು ಸುತ್ತಲಿನ ಆಗುಹೋಗುಗಳನ್ನು ಹಿಡಿಯುವ ಸಂವೇದನಾಶೀಲತೆಯ ಮೂಲಕ ಸಾಹಿತ್ಯವನ್ನು ಸೃಷ್ಟಿಸುತ್ತಾರೆ. ಅಂದರೆ 'ಬರಹ' ಮತ್ತು 'ಮೌಖಿಕ' ಈ ಎರಡು ರೂಪಗಳಲ್ಲಿರುವ ಭಾಷಿಕ ಅಭಿವ್ಯಕ್ತಿಯನ್ನು ಒಟ್ಟಾರೆಯಾಗಿ ಸಾಹಿತ್ಯವೆಂದು ಕರೆಯಲಾಗುತ್ತದೆ. ಪ್ರಪಂಚದ ಯಾವುದೇ ಸಾಹಿತ್ಯದ ಇತಿಹಾಸವನ್ನು ಗಮನಿಸಿದರೆ ಬರಹರೂಪದ ಸಾಹಿತ್ಯಕ್ಕೆ ಅಲ್ಲಿನ ಮೌಖಿಕ ರಚನೆಗಳೇ ಬೆನ್ನೆಲುಬಾಗಿರುವುದು ಕಂಡುಬರುತ್ತದೆ.

ಮಾನವನ ಪ್ರತಿಯೊಂದು ಅನುಭವಕ್ಕೂ ಒಂದು ಇತಿಹಾಸವಿರುವಂತೆ ಮಾನವ ನಿರ್ಮಿತ ಸಾಹಿತ್ಯಕ್ಕೂ ಒಂದು ಇತಿಹಾಸವಿದೆ. ಸಮಕಾಲೀನ ಸಾಹಿತ್ಯವನ್ನು ಅರಿತರೆ ಮಾತ್ರ ಸಾಲದು. ಆ ಸಾಹಿತ್ಯದ ಹಿಂದಿನ ಚರಿತ್ರೆಯನ್ನು ಅರಿಯಬೇಕು. ಇದನ್ನು ಅರಿಯಲು ಆಧಾರಗಳು ಅವಶ್ಯಕ. ಕೆಲವೊಮ್ಮೆ ಆಧಾರಗಳು ಸಿಗದೇ ಹೋಗಬಹುದು. ಇದರಿಂದ ಆ ಭಾಷೆಯ ಸಾಹಿತ್ಯ ಚರಿತ್ರೆಯನ್ನು ಕ್ರಮವಾಗಿ ನಿರೂಪಿಸಲು ಅಸಾಧ್ಯವಾಗುತ್ತದೆ. ಆದುದರಿಂದ ಸಾಹಿತ್ಯಚರಿತ್ರೆಗೆ ಮುಖ್ಯ ಆಧಾರವೆಂದರೆ ಆ ಭಾಷೆಯಲ್ಲಿರುವ ಗ್ರಂಥಭಂಡಾರ. ಅಲ್ಲಿರುವ ಗ್ರಂಥ ಸಮುದಾಯದ ವ್ಯವಸ್ಥಿತ ಅಧ್ಯಯನವೇ ಸಾಹಿತ್ಯ ಚರಿತ್ರೆ.

ಯಾವುದೇ ಸಮಾಜದ ಬದುಕು ಚೈತನ್ಯಪೂರ್ಣವಾಗಿರುವಂತೆ ನೋಡಿಕೊಳ್ಳ–ಬೇಕಾದುದು ಅಲ್ಲಿನ ಸಾಹಿತ್ಯದ ನಿಜವಾದ ಕರ್ತವ್ಯ. ಈ ಕರ್ತವ್ಯದಲ್ಲಿ ಲೋಪವೆಸಗುವ ಸಾಹಿತ್ಯವನ್ನು ಪ್ರಜ್ಞಾವಂತ ಸಮಾಜ ಮನ್ನಿಸಲಾರದು. ಹಾಗೊಮ್ಮೆ ಅಪ್ಪಿತಪ್ಪಿ ಮನ್ನಿಸಲ್ಪಟ್ಟರೂ

ಅದು ದೀರ್ಘಕಾಲ ಉಳಿಯಲಾರದು. ಯಾವುದೇ ಭಾಷೆಯ ಸಾಹಿತ್ಯ ಚರಿತ್ರೆಗೆ ತನ್ನದೇ ಆದ ವಿಶೇಷವಾದ ಸ್ವರೂಪ ಇರುತ್ತದೆ. ಆರಂಭ, ಪ್ರವೃತ್ತಿ, ಪ್ರಭಾವ ಮತ್ತು ವಿಕಾಸ ಅದರ ಸಾಮಾನ್ಯ ಸ್ವರೂಪ ತಿಳಿಸಿದರೆ, ಕಾಲ, ದೇಶ, ಪರಿಸ್ಥಿತಿ, ರಾಜಕೀಯ ಚರಿತ್ರೆ, ಸಾಮಾಜಿಕ-ಧಾರ್ಮಿಕ ಜೀವನ ಮತ್ತು ಸಾಹಿತ್ಯ ಪರಿಸರ ಅದರ ವಿಶಿಷ್ಟ ಸ್ವರೂಪವನ್ನು ತಿಳಿಸುತ್ತದೆ.[೧]

ಅಷ್ಟೇ ಅಲ್ಲ ಯಾವುದೇ ಪರಿಸರದ ಜೀವಪರ ಆಶಯಗಳ ಮೇಲೆ ಹಲ್ಲೆ ಮಾಡಲು ಧಾವಿಸುವ ಘಾತುಕಶಕ್ತಿಗಳನ್ನು ವಿರೋಧಿಸುವುದು ಸಹ ಸಾಹಿತ್ಯ ಸಂವೇದನೆಯ ಮುಖ್ಯಗುರಿಯಾಗಿದೆ. ಸಾಹಿತ್ಯ ಕೇವಲ ಸಮಾಜದ ಪ್ರತಿಬಿಂಬವನ್ನು ತೋರಿಸುವ ಕನ್ನಡಿ ಮಾತ್ರವಲ್ಲ. ಆ ಮೂಲಕ ಬದುಕನ್ನು ಮುನ್ನಡೆಸುವ ಕೈದೀವಿಗೆಯೂ ಹೌದು. ನಮ್ಮ ನಾಡಿನ ಹಲವು ಲೇಖಕರು ಕವಿಗಳು ವಿದ್ವಾಂಸರು ಚಿಂತನಶೀಲರೆಲ್ಲರೂ ಜೀವಲೋಕದ ಸರ್ವಾಂಗೀಣ ಏಳಿಗೆಯ ದಿಕ್ಕಿನಲ್ಲಿ ದುಡಿದಿದ್ದಾರೆ ಎಂಬುವುದು ವಿಶೇಷವಾಗಿದೆ.

ಕನ್ನಡ ಸಾಹಿತ್ಯಕ್ಕೆ ಪಂಪ, ಹರಿಹರ, ಬಸವ, ಕುಮಾರವ್ಯಾಸ, ಕನಕದಾಸ, ಅಲ್ಲಮಪ್ರಭು, ಜೇಡರ ದಾಸಿಮಯ್ಯ, ಸರ್ವಜ್ಞ, ಪುರಂದರದಾಸ ಇವರುಗಳ ಕೊಡುಗೆ ವಿಶೇಷವಾದದ್ದು. ಮಾನವಪರ ಸಂವೇದನೆಯ ದೃಷ್ಟಿಯಿಂದ ನೋಡುವುದಾದರೆ ಇವರ ಕೊಡುಗೆ ಅಪಾರ. ಹಾಗೆಯೇ ಪರಿಸರ ಪ್ರಜ್ಞೆಯ ದೃಷ್ಟಿಯಿಂದ ಅವಲೋಕಿಸಿದರೆ ನಮ್ಮ ಪ್ರಾಚೀನ ಕವಿಗಳಲ್ಲಿ ಕಾಡಿನ ಹೆಮ್ಮರಗಳ ದೈತ್ಯಾಕಾರವನ್ನಾಗಲೀ ಅರಣ್ಯದ ಭವ್ಯವಿಸ್ತಾರವನ್ನಾಗಲೀ ನಾವು ಕಾಣಲು ಸಾಧ್ಯವಿಲ್ಲ. ಆದರೆ ಪಂಪ, ರಾಘವಾಂಕ, ಲಕ್ಷ್ಮೀಶ ಇವರಿಗೆ ಕಾಡಿನ ಎಲ್ಲಾ ಪರಿಚಯವಿದೆ ಎಂದು ಹೇಳಬಹುದು. ಆದರೆ ಇವರಲ್ಲಿ ಯಾರೊಬ್ಬರೂ ಈ ಹೊತ್ತಿನ ಪರಿಸರ ಪ್ರಜ್ಞೆಯ ಬರಹಗಳನ್ನು ಆದ್ಯತೆಯಾಗಿ ಕೊಟ್ಟಿಲ್ಲ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪರಿಸರದ ಬಗ್ಗೆ ವೈಜ್ಞಾನಿಕವಾಗಿ ವಿವರಿಸುವುದು ಆಧುನಿಕ ಲೇಖಕರ ವಿಶಿಷ್ಟವಾಗಿದೆ. ಅವರು ಪರಿಸರವನ್ನು ಜೀವಕೇಂದ್ರವಾಗಿಸಿ ವಿಶ್ಲೇಷಿಸುವುದನ್ನು ಕಾಣಬಹುದು. ಹಾಗೆಂದು ಅವರೆಲ್ಲಾ ವಿಜ್ಞಾನ ಬರಹಗಾರರಲ್ಲ. ಬದಲಾಗಿ ವೈಜ್ಞಾನಿಕ ಮನೋಧರ್ಮದ ಅನುಭವ ಬರಹಗಾರರು. ಅವರು ಪರಿಸರದ ಬಗೆಗಿನ ತಮ್ಮ ತಿಳಿವಳಿಕೆಯನ್ನು ಬಹಳ ಸರಳವಾಗಿ ವೈಜ್ಞಾನಿಕ ನೆಲೆಯಲ್ಲಿ ಕಥನ ರೂಪದಲ್ಲಿ ರೂಪಿಸುತ್ತಾ ಬಂದಿದ್ದಾರೆ. ಅವರಲ್ಲಿ ಪ್ರಮುಖರಾದವರೆಂದರೆ ಕುವೆಂಪು, ಬಿ.ಜಿ.ಎಲ್.ಸ್ವಾಮಿ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ನಾಗೇಶ್ ಹೆಗಡೆ, ಚಂದ್ರಶೇಖರ ನಂಗಲಿ ಮತ್ತು ಟಿ.ಎಸ್.ವಿವೇಕಾನಂದ - ಇವರುಗಳು ನಮ್ಮ ಪರಿಸರದ ಆಗುಹೋಗುಗಳ ಬಗ್ಗೆ ಹಲವು ಪುಸ್ತಕಗಳನ್ನು ಬರೆದಿದ್ದಾರೆ.

## ವಿಷಯ ವ್ಯಾಪ್ತಿ

ಈ ಪರಿಸರದ ಕಥನಗಳಲ್ಲಿ ಅವರು ಪರಿಸರ ಸಂರಕ್ಷಣೆಯ ಬಗ್ಗೆ ಹೆಚ್ಚು ಒತ್ತು ನೀಡಿದ್ದಾರೆ. ಪರಿಸರ ನಾಶವಾಗುತ್ತಿರುವುದಕ್ಕೆ ಮೂಲಕಾರಣ ಅದರಿಂದ ಬೀರುವ ದುಷ್ಪರಿಣಾಮ ಅವುಗಳನ್ನು ಉಳಿಸಿಕೊಳ್ಳುವ ತುರ್ತು, ಜೊತೆಗೆ ವಿಶೇಷ ಗುಣ ಹೊಂದಿರುವ ಗಿಡಮರಗಳ ಬಗ್ಗೆ ಮಾಹಿತಿ ವಿವರಣೆಯನ್ನು ನೀಡಿದ್ದಾರೆ. ಹಲವು ವಿಷಯಗಳಲ್ಲಿ ಆಸಕ್ತಿ ಮೂಡಿಸುವ ರೀತಿಯಲ್ಲಿ ವಿಶ್ಲೇಷಣೆ ಮಾಡಿರುವುದನ್ನು ನೋಡಬಹುದು.

ಇಪ್ಪತ್ತನೆಯ ಶತಮಾನದ ಆರಂಭಕ್ಕೆ ಸಂಬಂಧಿಸಿದ ಇಡೀ ಯುಗ ಸಂದರ್ಭವನ್ನು ಗರ್ಭೀಕರಿಸಿಕೊಂಡಂತೆ ಕಾಣುವ ಆಧುನಿಕ ಲೇಖಕರಾದ ಕುವೆಂಪು, ಬಿ.ಜಿ.ಎಲ್.ಸ್ವಾಮಿ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ನಾಗೇಶ್ ಹೆಗಡೆ, ಚಂದ್ರಶೇಖರ ನಂಗಲಿ, ಟಿ.ಎಸ್.ವಿವೇಕಾನಂದ ಮುಂತಾದವರ ಬರಹಗಳನ್ನು ನಾನಾ ಮಗ್ಗುಲುಗಳಿಂದ ವಿಶ್ಲೇಷಿಸಲು ಸಾಧ್ಯವಿದೆ. ಅದು ಸುದೀರ್ಘ ಜೀವನಾನುಭವಗಳ ದೊಡ್ಡ ಪ್ರಪಂಚ. ಭಾರತೀಯ ಸಾಮಾಜಿಕ ತತ್ತ್ವಜ್ಞಾನದ ಹಿನ್ನೆಲೆಯಲ್ಲಿ ಕಾವ್ಯಮೀಮಾಂಸೆಯ ತತ್ತ್ವಗಳಡಿಯಲ್ಲಿ, ಪರಂಪರೆಯೊಂದಿಗಿನ ಅನುಸಂಧಾನ ಮುಖಾಮುಖಿಗಳ ಹೊಯ್ದಾಟದಲ್ಲಿ ಇವರ ಸಾಹಿತ್ಯವನ್ನು ಪ್ರವೇಶಿಸಲು ಸಾಧ್ಯವಿದೆ. ಇಲ್ಲಿ ಬೇರೂರಿರುವ ಸಾಮಾಜಿಕ–ಆರ್ಥಿಕ ವಿಷಮತೆಗಳ ನಡುವೆಯೂ ಜೀವಂತವಾಗಿರುವ ಪರಿಸರ ಸಮಸ್ಯೆ, ನಿಸರ್ಗಪ್ರಿಯತೆ ಮತ್ತು ಸ್ವಾಭಿಮಾನದ ಬದುಕಿನ ಆಕಾಂಕ್ಷೆಯ ನೆಲೆಯಲ್ಲಿ ಹೀಗೆ ನಾನಾಮಾರ್ಗಗಳಲ್ಲಿ ಒಳಹೋಗುವುದು ಸಾಧ್ಯವಿದೆ.

ಹಾಗೆಯೇ ನಾನಾಮಾರ್ಗಗಳ ಮೂಲಕ ಇವರ ಸಾಹಿತ್ಯ ಪ್ರಪಂಚವನ್ನು ಒಮ್ಮೆಗೆ ವಿಶ್ಲೇಷಿಸಲು ತೊಡಗುವುದು ಒಂದು ಸವಾಲಿನ ಸಂಗತಿ. ಒಂದರ್ಥದಲ್ಲಿ ಇಂತಹ ಅಧ್ಯಯನಗಳು ಅತಿವ್ಯಾಪ್ತಿ ದೋಷದಿಂದ ಬಳಲುತ್ತವೆ. ಅಷ್ಟೇ ಅಲ್ಲ ಇಂತಹ ಅಧ್ಯಯನ ನಿರ್ವಹಣೆ ಕಷ್ಟಸಾಧ್ಯ. ಹಾಗೂ ಒಂದು ಖಚಿತ ತೀರ್ಮಾನಗಳಿಗೆ ಬರಲಾಗದೆ ಅದಕ್ಕೆ ಬಲಿಯಾಗಬಹುದು. ಜೊತೆಗೆ ಈ ಅಧ್ಯಯನದಲ್ಲಿ ನ್ಯಾಯಬದ್ಧತೆಯ ಅಂಶ ಪ್ರಮುಖವಾಗಿರುತ್ತದೆ. ಆಧುನಿಕ ಕನ್ನಡದಲ್ಲಿ ಬರುತ್ತಿರುವ ಪರಿಸರ ಸಂರಕ್ಷಣೆಯ ಬರವಣಿಗೆಗಳಲ್ಲಿ ಹೆಚ್ಚು ಕನ್ನಡ ಓದುಗರನ್ನು ಆಕರ್ಷಿಸುತ್ತಿರುವುದು ಇತ್ತೀಚಿನ ಲೇಖಕರ ಬರವಣಿಗೆಗಳು. ಪರಿಸರ ಸಂರಕ್ಷಣೆಯ ವಿಷಯಗಳನ್ನು ರೋಚಕವಾಗಿ ತಿಳಿಸುವುದರ ಜೊತೆಗೆ, ಗಂಭೀರ ವಿಷಯಗಳನ್ನು ಅದರ ಸಮಸ್ಯೆಗಳನ್ನು ಸಾಮಾನ್ಯ ಓದುಗನ ಅಂತರಾಳವನ್ನು ತಲುಪುವ ಹಾಗೆ ನಿರೂಪಿಸುತ್ತಾರೆ. ಇವರ ಪರಿಸರ ಕಥೆಗಳಲ್ಲಿ ಸಮಾಜದ ಕಳಕಳಿ, ಪರಿಸರದ ಅವಾಂತರಗಳಿಗೆ ಕಾರಣೀಕೃತ ಅಂಶಗಳ ವಿರುದ್ಧ ನೈತಿಕ ಸಿಟ್ಟು, ಅಸಮಾಧಾನ ವ್ಯಕ್ತವಾಗುತ್ತವೆ.

ಪ್ರತಿಯೊಬ್ಬ ಓದುಗನು ತನ್ನ ಸುತ್ತಮುತ್ತಲಿನ ಪರಿಸರದ ಬಗ್ಗೆ ಕಾಳಜಿ ಹೊಂದಲು ಸಮಾಜದ ಬಗ್ಗೆ ಕಳಕಳಿಯನ್ನು ಬೆಳೆಸಿಕೊಳ್ಳಲು ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಳ್ಳಲು, ಸಮತಾವಾದದ ಮೇಲೆ ನಂಬಿಕೆಯಿಡಲು ಇವರ ಪರಿಸರ ಕಥನಗಳು ಪೂರಕವಾಗಿವೆ. ಈ ರೀತಿಯಲ್ಲಿ 'ಪರಿಸರಪ್ರಜ್ಞೆ' ಪರಿಕಲ್ಪನೆಯ ನೆರವಿನಿಂದ ಹಲವು ಲೇಖಕರ ಸಾಹಿತ್ಯ ಕೊಡುಗೆಗಳನ್ನು ಪುನರ್‌ಮೌಲ್ಯೀಕರಿಸುವ ಪರಿಸರ ಕಥಾಸಾಹಿತ್ಯದ ಚಾರಿತ್ರಿಕ ಪ್ರಾಮುಖ್ಯತೆಯನ್ನು ಗುರುತಿಸುವ ಆ ಮೂಲಕ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ 'ಪರಿಸರಪ್ರಜ್ಞೆ'ಯನ್ನು ಮೂಡಿಸುವ ಪ್ರಕ್ರಿಯೆಯಲ್ಲಿ ಅಧ್ಯಯನವು ವಿಶೇಷವಾಗಿ ತೊಡಗಿದೆ.[೨]

## ಅಧ್ಯಯನದ ಉದ್ದೇಶ

ಆಧುನಿಕ ಕನ್ನಡದಲ್ಲಿ ತೆರೆದುಕೊಂಡ ಮುಕ್ತ ಅವಕಾಶದ ವಾತಾವರಣದಲ್ಲಿ ಜನ ಬದುಕಿನ ಆದ್ಯತೆಗಳು ಕ್ರಮೇಣ ಪಲ್ಲಟಗೊಳ್ಳುತ್ತಿವೆ. ಅದರೊಟ್ಟಿಗೆ ಬದುಕನ್ನು ನೋಡುವ ಮನೋಧರ್ಮಗಳೂ ಬಹುರೂಪ ಪಡೆದುಕೊಳ್ಳುತ್ತಿವೆ. ಸಾಹಿತ್ಯವು ಆವರಿಸಿಕೊಳ್ಳುತ್ತಿರುವ ಕ್ಷೇತ್ರದ ಗುರಿ–ಸಾಧ್ಯತೆಗಳು ಹೆಚ್ಚಾಗಿವೆ. ಸಾಹಿತ್ಯ ಅಧ್ಯಯನದ ವ್ಯಾಪ್ತಿ ವಿಶಾಲವಾಗುತ್ತಿದೆ. ವ್ಯಕ್ತಿಕೇಂದ್ರಿತ ವಿಶ್ಲೇಷಣೆಗಳಿಂದ ದೂರ ಸಾಗಿಬಂದು ಬಹುಜನಸಮುದಾಯದ ತಾಕಲಾಟಗಳನ್ನು ಮುಟ್ಟುವ ಮಟ್ಟಿಗೆ ಸಾಹಿತ್ಯ ವ್ಯಾಪ್ತಿ ಬೆಳೆದಿದೆ.

ಆಧುನಿಕ ಕನ್ನಡದಲ್ಲಿ ಪರಿಸರಪ್ರಜ್ಞೆಯ ಬಗ್ಗೆ ಬರವಣಿಗೆಯ ಮೂಲಕ ಕೃಷಿಮಾಡಿದವರು ಹಲವರು. ಪ್ರಸ್ತುತದಲ್ಲಿ ಹೆಚ್ಚು ಓದುಗರನ್ನು ಆಕರ್ಷಿಸುತ್ತಿರುವ ಇವರ ಬರವಣಿಗೆಗಳು ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚು ಮಾಡುವುದರ ಜೊತೆಜೊತೆಯಲ್ಲೇ ಕನ್ನಡ ಓದುಗರನ್ನು ವೈಚಾರಿಕವಾಗಿ ಚಿಂತಿಸಲು ಪ್ರೇರೇಪಿಸುತ್ತದೆ. ಇವರು ಪರಿಸರ ಸಂರಕ್ಷಣೆಯ ವಿಷಯವನ್ನು ಕೇವಲ ಕತೆ ಅಥವಾ ಪ್ರಾಯೋಗಿಕ ಫಲಿತಾಂಶದ ರೀತಿಯಲ್ಲಿ ಹೇಳದೆ, ಒಟ್ಟು ಜೀವರಾಶಿಯ ಸುಸ್ಥಿರ ಬದುಕಿಗೆ ಅಗತ್ಯವಾದ ಮೂಲಸೌಕರ್ಯ ಮತ್ತು ಅದರ ಸಾಧಕಬಾಧಕಗಳನ್ನು ಸರಲವಾಗಿ ಪ್ರತಿಯೊಬ್ಬರಿಗೂ ಮನಮುಟ್ಟುವ ರೀತಿಯಲ್ಲಿ ಅವರ ಅನುಭವವನ್ನು ಬರವಣಿಗೆಯ ರೂಪದಲ್ಲಿ ವ್ಯಕ್ತಪಡಿಸಿದ್ದಾರೆ.

ಅವರ ಚಿಂತನೆಯ ಪ್ರಖರತೆ ಅಗಾಧ ತಿಳಿವಳಿಕೆ ಪರಿಸರ ಪ್ರಜ್ಞೆಯ ಬಗ್ಗೆ ಅವರ ಅನುಭವಗಳನ್ನು ಅಭಿವ್ಯಕ್ತಪಡಿಸಿರುವ ವಿಧಾನ ಹೊಸತನದಿಂದ ಕೂಡಿದೆ. ಕನ್ನಡ ಸಾಹಿತ್ಯದ ವೈವಿಧ್ಯತೆಗೆ ಹಾಗೂ ಇವರಿಗಿದ್ದ ಪರಿಸರ ಕಾಳಜಿ ಬಗ್ಗೆ ಇದುವರೆಗೂ ಚರ್ಚೆಯಾಗಿಲ್ಲ. ಪರಿಸರ ಸಂರಕ್ಷಣೆಯ ಕುರಿತು ಚರ್ಚಿಸುವ ಮತ್ತು ಇವರ ಕೊಡುಗೆಗಳನ್ನು ಗುರುತಿಸುವ ಕೆಲಸ ಆಗಬೇಕಾಗಿದೆ. ಪರಿಸರ ಪ್ರಜ್ಞೆಯ ವಿಷಯಗಳನ್ನು ತಿಳಿಸುವುದಲ್ಲದೆ, ಯಾಂತ್ರಿಕ

ಯುಗದಲ್ಲಿ ಬದುಕುತ್ತಿರುವ ಮನುಷ್ಯ ಹೇಗೆ ಮಾನವೀಯ ಮೌಲ್ಯಗಳನ್ನು ಕಳೆದುಕೊಳ್ಳುತ್ತಿದ್ದಾನೆ ಎಂಬುದನ್ನು ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ವೈಜ್ಞಾನಿಕ ಹಿನ್ನೆಲೆಯಲ್ಲಿ ಕಾಣಬಹುದು.[೩]

ಈ ಪರಿಸರದ ಕಥನಗಳಲ್ಲಿ ಅವರು ಪರಿಸರ ಸಂರಕ್ಷಣೆಯ ಬಗ್ಗೆ ಹೆಚ್ಚು ಒತ್ತು ನೀಡಿದ್ದಾರೆ. ಪರಿಸರ ನಾಶವಾಗುತ್ತಿರುವುದಕ್ಕೆ ಮೂಲ ಕಾರಣ. ಅದರಿಂದ ಬೀರುವ ದುಷ್ಪರಿಣಾಮ ಅವುಗಳನ್ನು ಉಳಿಸಿಕೊಳ್ಳುವ ತುರ್ತು ಜೊತೆಗೆ ವಿಶೇಷಗುಣ ಹೊಂದಿರುವ ಗಿಡಮರಗಳ ಬಗ್ಗೆ ಮಾಹಿತಿ ಹಾಗೂ ವಿವರಣೆಯನ್ನು ನೀಡಿದ್ದಾರೆ. ಇಂಥ ಹಲವು ವಿಷಯಗಳಲ್ಲಿ ಆಸಕ್ತಿ ಮೂಡಿಸುವ ರೀತಿಯಲ್ಲಿ ವಿಶ್ಲೇಷಣೆ ಮಾಡಿರುವುದನ್ನು ನೋಡಬಹುದು. ಪರಿಸರ ಸಮಸ್ಯೆಯು ಸ್ಥಳೀಯ ಸಮಸ್ಯೆಯು ಹೌದು. ಅಂತಾರಾಷ್ಟ್ರೀಯ ಸಮಸ್ಯೆಯೂ ಹೌದು. ಪರಿಸರ ಸಮಸ್ಯೆ ಜಗತ್ತಿನ ಸಮಸ್ಯೆಯಾಗಿರುವುದರಿಂದ ಪ್ರಪಂಚದಲ್ಲಿ ಒಂದು ನಿರ್ದಿಷ್ಟ ಯೋಜನೆಯನ್ನು ಹಾಕಿಕೊಂಡು ಮುಂದುವರೆಯಬೇಕು. ಕನ್ನಡ ಸಾಹಿತ್ಯವು ಪರಿಸರ ಸಮಸ್ಯೆಗೆ ಹೇಗೆ ಸ್ಪಂದಿಸುತ್ತಿದೆ? ಪರಿಸರ ಸಮಸ್ಯೆಗೆ ಮೂಲ ಕಾರಣವೇನು? ಆ ಸಮಸ್ಯೆಯಿಂದಾಗುವ ಪರಿಣಾಮವೇನು? ಸಮಸ್ಯೆಯನ್ನು ಹತೋಟಿಗೆ ತರುವ ಮಾರ್ಗಗಳೇನು? ಮುಂತಾದ ಅಂಶಗಳನ್ನು ಅರಿತುಕೊಳ್ಳುವ ಹಿನ್ನೆಲೆಯಲ್ಲಿ ಈ ಸಂಶೋಧನೆ ಕೈಗೊಳ್ಳಲಾಗಿದೆ.

**"ಆಧುನಿಕ ಕನ್ನಡದ ಪ್ರಾತಿನಿಧಿಕ ಪರಿಸರ ಕಥನಗಳ ಅಧ್ಯಯನ"** ಪ್ರಸ್ತುತ ನಿಬಂಧದ ಶೀರ್ಷಿಕೆಯಾಗಿದೆ. ಈ ವಿಷಯವನ್ನು ಬಹು ಆಯಾಮಗಳಲ್ಲಿ ವಿಶ್ಲೇಷಿಸುವ ದೃಷ್ಟಿಯಿಂದ ಒಟ್ಟು ಆರು ಪ್ರಮುಖವಾದ ಅಧ್ಯಾಯಗಳನ್ನಾಗಿ ವಿಭಾಗಿಸಿಕೊಂಡು ಸಂಶೋಧನೆ ನಡೆಸಲಾಗಿದೆ. ಅವುಗಳ ವಿವರ ಮುಂದಿನಂತಿದೆ:

**ಅಧ್ಯಾಯ – ೧**

**ಅಧ್ಯಯನದ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶ**

**ಅಧ್ಯಾಯ – ೨**

**ಕನ್ನಡದ ಪರಿಸರ ಕಥನಗಳ ಇತಿಹಾಸ ಹಾಗೂ ಮಹತ್ವ**

**ಅಧ್ಯಾಯ – ೩**

**ಪರಿಸರ ಕಥನಕಾರರ ಬದುಕು ಮತ್ತು ಸಾಧನೆಯ ಪರಿಚಯ**

## ಅಧ್ಯಾಯ – ೨ : ಕನ್ನಡದ ಪರಿಸರ ಕಥನಗಳ ಇತಿಹಾಸ ಹಾಗೂ ಮಹತ್ವ

ಕನ್ನಡ ಸಾಹಿತ್ಯದಲ್ಲಿ ಪ್ರಕೃತಿಯ ವರ್ಣನೆಯು ವೈವಿಧ್ಯಮಯವಾಗಿಲ್ಲ. ಸಂಪ್ರದಾಯಬದ್ಧ ರೀತಿಯಲ್ಲಿ ಅಲ್ಲಲ್ಲಿ ಕೆಲವು ವರ್ಣನೆಗಳನ್ನು ಕಾಣುತ್ತೇವೆ. ಮುಖ್ಯವಾಗಿ ಅಷ್ಟಾದಶ ವರ್ಣನೆಯ ಭಾಗವಾಗಿ ಪರಿಸರ ವರ್ಣನೆಯನ್ನು ಪ್ರಾಚೀನ ಕವಿಗಳು ಮಾಡಿರುವುದುಂಟು. ಅವು ಸಹಜವಾಗಿರದೆ ಶಾಸ್ತ್ರಜಡವಾಗಿರುವುದೇ ಹೆಚ್ಚು. ಅಲ್ಲಲ್ಲಿ ಕೆಲವು ಪ್ರತಿಭಾಶಾಲಿಗಳಾದ ಕವಿಗಳು ತಮ್ಮ ಪ್ರತಿಭಾಶಕ್ತಿಯನ್ನು ಬಳಸಿಕೊಂಡು ಉತ್ತಮ ಸೃಜನಶೀಲ ವರ್ಣನೆ ಮಾಡಿ ಕಾವ್ಯದ ಸೊಬಗನ್ನು ಶ್ರೀಮಂತಗೊಳಿಸಿದ್ದಾರೆ.

ಅಷ್ಟಾದಶ ವರ್ಣನೆಯ ಸಂದರ್ಭದಲ್ಲಿ ಬರುವ ಪ್ರಕೃತಿ ವಿವರಗಳಲ್ಲಿ (ಪುರ, ಸಮುದ್ರ, ಅರಣ್ಯ, ಋತು ಇತ್ಯಾದಿ) ವರ್ಣನೆಗಳು ಹೆಚ್ಚಿನವು. ಅವು ಬಹಳಷ್ಟು ಯಾಂತ್ರಿಕ ಹಾಗೂ ನೀರಸ ವಿವರಗಳಿಂದ ಕೂಡಿರುವುದು ಕಂಡುಬರುತ್ತದೆ. ಕಾವ್ಯವನ್ನು ರಚಿಸುವಾಗ ಅವಶ್ಯಕತೆ ಇರಲಿ ಅಥವಾ ಇಲ್ಲದಿರಲಿ, ಲಾಕ್ಷಣಿಕರು ಹೇಳಿದ ಹದಿನೆಂಟು ವರ್ಣನೆಯನ್ನು ಸಂದರ್ಭಕ್ಕೆ ತಕ್ಕಂತೆ ಸಾಹಿತ್ಯದಲ್ಲಿ ಸೇರಿಸಬೇಕಾಗಿತ್ತು. ನಿಯಮ ಮೀರಿದರೆ ಆ ಸಾಹಿತ್ಯಕ್ಕೆ ಮಾನ್ಯತೆ ದೊರೆಯುತ್ತಿರಲಿಲ್ಲ. ಆದ್ದರಿಂದ ಆ ಸಂಪ್ರದಾಯಕ್ಕೆ ಶರಣಾಗಿದ್ದರು, ಅಂತಹ ನಿರ್ಬಂಧಗಳ ನಡುವೆಯೂ ಪಂಪ, ಜನ್ನ, ನಾಗಚಂದ್ರ, ಹರಿಹರ ಮುಂತಾದವರು ತಮ್ಮ ಪ್ರತಿಭಾಶಕ್ತಿಯನ್ನು ಮೆರೆದು ಕನ್ನಡ ಸಾಹಿತ್ಯವನ್ನು ಈ ನಿಟ್ಟಿನಲ್ಲಿಯೂ ಶ್ರೀಮಂತಗೊಳಿಸಿದ್ದಾರೆ. ಈ ಎಲ್ಲಾ ವಿವರಗಳನ್ನು ಸ್ಥೂಲವಾಗಿ ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗುತ್ತದೆ.

**ಅಧ್ಯಾಯ – ೩ : ಪರಿಸರ ಕಥನಕಾರರ ಬದುಕು ಮತ್ತು ಸಾಧನೆಯ ಪರಿಚಯ**

ಆಧುನಿಕ ಕನ್ನಡ ಸಾಹಿತ್ಯ ಎಂದ ತಕ್ಷಣ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗ ಹಾಗೂ ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಕಾಲಘಟ್ಟವನ್ನು ನಾವು ನೋಡುತ್ತೇವೆ. ಈ ಸಾಹಿತ್ಯವು ಒಂದು ಪ್ರಜ್ಞಾಪೂರ್ವಕವಾದ ಹಿನ್ನೆಲೆಯಲ್ಲಿ ಸೃಷ್ಟಿಕೊಂಡಿದೆ. ಇದಕ್ಕೆ ಮೂಲ ಕಾರಣ ಪಾಶ್ಚಾತ್ಯ ಶಿಕ್ಷಣ ಮತ್ತು ಇಂಗ್ಲಿಷ್ ಸಾಹಿತ್ಯದ ಪ್ರಭಾವ. ಅದರ ಪ್ರವೇಶದಿಂದ ಇಲ್ಲಿ ಹೊಸ ಸಾಹಿತ್ಯ ನಿರ್ಮಾಣವಾಯಿತು. ಈ ಯುಗಧರ್ಮಕ್ಕೆ ಅನುಗುಣವಾಗಿ ಕನ್ನಡ ಸಾಹಿತ್ಯದಲ್ಲಿ ಹಲವು ಸಾಹಿತ್ಯ ಚಳವಳಿಗಳು ಕಂಡುಬಂದವು. ಅವುಗಳು ಕ್ರಮವಾಗಿ ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ ಸಾಹಿತ್ಯ, ಇತ್ತೀಚಿನ ದಿನಗಳಲ್ಲಿ ಪರಿಸರ ಕಥನ ಸಾಹಿತ್ಯದ ಬಗ್ಗೆ ಚಿಂತನೆಗಳು ಕಂಡುಬರುತ್ತಿರುವುದು ಗಮನಾರ್ಹ ಸಂಗತಿ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಜೀವ ಪರಿಸರದ ಆಗುಹೋಗುಗಳ ಬಗ್ಗೆ ಹಲವು ಲೇಖಕರು, ಕವಿಗಳು, ಪರಿಸರವಾದಿಗಳು, ಪ್ರಜ್ಞಾವಂತರು ಪರಿಸರದ ಬಗ್ಗೆ ಕಾಳಜಿ ತೋರಿರುವುದನ್ನು ಕಾಣಬಹುದು. ಅವರಲ್ಲಿ ಪ್ರಮುಖರಾದವರೆಂದರೆ ಕುವೆಂಪು, ಬಿ.ಜಿ.ಎಲ್.ಸ್ವಾಮಿ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ನಾಗೇಶ್ ಹೆಗಡೆ, ಚಂದ್ರಶೇಖರ ನಂಗಲಿ, ಟಿ.ಎಸ್.ವಿವೇಕಾನಂದ ಮುಂತಾದವರು.

೧) **ಕುವೆಂಪು:** ರಾಷ್ಟ್ರಕವಿ ಕುವೆಂಪು ಅವರು ಈ ಶತಮಾನದ ಮೇರುಕವಿ. ಕನ್ನಡದ ದೃಷ್ಟಿಯಿಂದ ಮಾತ್ರ ಅಲ್ಲ, ಜಗತ್ ಸಾಹಿತ್ಯದ ದೃಷ್ಟಿಯಿಂದ ಕೂಡ ಈ ಮಾತು ಸತ್ಯ. ಎಲ್ಲಾ ಕಾಲದ ಪಾಶ್ಚಾಮಾತ್ಯ ಮತ್ತು ಪೌರಾತ್ಯ ಮಹಾಕವಿಗಳ ಸಾಲಿನಲ್ಲಿ ಅವರಿಗೆ ಒಂದು ಗೌರವದ ಸ್ಥಾನ ಮೀಸಲು. ಇವರು ಪರಿಶ್ರಮದಿಂದ ಆಧ್ಯಾತ್ಮಿಕ ಹಾಗೂ ವೈಚಾರಿಕ ಪ್ರಾಬಲ್ಯದಿಂದ ಹಿಮಾಲಯದ ಎತ್ತರಕ್ಕೆ ಬೆಳೆದು ನಿಂತ ಗೌರಿಶಂಕರ, ಇವರು ಕವಿತೆ,

ಕಥೆ, ಪ್ರಬಂಧ, ಕಾದಂಬರಿ, ಕಥನಕಾವ್ಯ, ಖಂಡಕಾವ್ಯ, ಮಹಾಕಾವ್ಯ, ಅನುವಾದ, ಮೀಮಾಂಸೆ ಮುಂತಾದವು ಹಾಗೆಯೇ ಎಲ್ಲಾ ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ. ಆ ಮೂಲಕ ಆಧುನಿಕ ಕನ್ನಡ ಸಾಹಿತ್ಯದ ಪರಿಧಿಯನ್ನು ವಿಶ್ವದಗಲಕ್ಕೆ ವಿಸ್ತರಿಸಿ ಮೆರೆದ ಚೇತನರಾಗಿದ್ದಾರೆ.

೨) **ಬಿ.ಜಿ.ಎಲ್.ಸ್ವಾಮಿ:** ಇವರು ಕರ್ನಾಟಕದ ಹಿರಿಯ ವಿಜ್ಞಾನಿ ಮತ್ತು ಸಾಹಿತಿ. ಕನ್ನಡದ ಹಿರಿಯ ವಿದ್ವಾಂಸ ಚಿಂತನಶೀಲ ಬರಹಗಾರ. ಇವರು ಕನ್ನಡದ ಹಿರಿಯ ಕವಿ ಡಿ.ವಿ.ಜಿ. ಅವರ ಮಗ ಎಂಬುದು ವಿಶೇಷ ಸಂಗತಿ. ಇವರು ವಿದ್ಯಾಭ್ಯಾಸ ಮಾಡುತ್ತಿರುವಾಗಲೇ ಕರ್ನಾಟಕ ಸಂಘದ ಕಾರ್ಯದರ್ಶಿಯಾಗಿ ಕೆಲಸ ಮಾಡಿದರು. ೧೯೩೯ರಲ್ಲಿ ಸಸ್ಯಶಾಸ್ತ್ರವನ್ನು ಅಧ್ಯಯನ ಮಾಡಿ ಬಿ.ಎಸ್ಸಿ(ಆನರ್ಸ್) ಪರೀಕ್ಷೆಯಲ್ಲಿ ಪ್ರಥಮದರ್ಜೆಯಲ್ಲಿ ತೇರ್ಗಡೆಯಾದರು. ಸಸ್ಯದ ಬೇರಿಗೂ ಕಾಂಡಕ್ಕೂ ಜೋಡಣೆಯ ಭಾಗವನ್ನು ಕುರಿತು ಒಂದು ನೂರುವರ್ಷ ಎಲ್ಲಾ ಸಸ್ಯ ವಿಜ್ಞಾನಿಗಳು ಒಪ್ಪಿಕೊಂಡಿದ್ದ ಸಿದ್ಧಾಂತವನ್ನು ಬಿ.ಜಿ.ಎಲ್.ಸ್ವಾಮಿಯವರ ಸಂಶೋಧನೆಯಿಂದ ತಲೆ ಕೆಳಗಾಯಿತು. ಸಸ್ಯಶಾಸ್ತ್ರದ ಬಗ್ಗೆ ಹಲವು ಸಂಶೋಧನೆ ಮಾಡಿ ವಾಸ್ತವಾಂಶವನ್ನು ಜನರ ಮುಂದೆ ತೆರೆದಿಟ್ಟವರಲ್ಲಿ ಪ್ರಮುಖರು.

೩) **ಕೆ.ಪಿ.ಪೂರ್ಣಚಂದ್ರ ತೇಜಸ್ವಿ:** ಇವರು ಸಮಾಜವಾದಿ, ಕಥೆಗಾರ, ಕಾದಂಬರಿಗಾರ ಹಾಗೂ ರಾಜಕೀಯ ಚಿಂತಕರು. ನವ್ಯ ಹಾಗೂ ನವ್ಯೋತ್ತರ (ದಲಿತ ಬಂಡಾಯ) ಚಳವಳಿಗಳ ಸಂದರ್ಭದಲ್ಲಿ ಒಬ್ಬ ಪ್ರಮುಖ ಚಿಂತಕರು. ಹಾಗೆಯೇ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಇವರ ಕೊಡುಗೆ ಅಪಾರವಾದುದು. ಪರಿಸರದ ಕತೆಯಲ್ಲಿ ಜೀವ ಪರಿಸರದ ಆಗುಹೋಗುಗಳ ಬಗ್ಗೆ ವಿಶ್ಲೇಷಣೆ ಮಾಡಿದ್ದಾರೆ. ಇವರು ಹಲವು ಕಥೆ ಕಾದಂಬರಿ-ಗಳನ್ನು ಬರೆದಿದ್ದಾರೆ. ಇವರ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು ನೋಡಬಹುದು.

೪) **ನಾಗೇಶ್ ಹೆಗಡೆ:** ಇವರ ಬದುಕು ಆದರ್ಶಪ್ರಾಯವಾದುದು. ನಾಗೇಶ್ ಹೆಗಡೆಯವರ ಬದುಕು ಅವರ ಬರಹದಂತೆಯೇ ಪ್ರಖರ ವೈಚಾರಿಕತೆಯಿಂದ ಕೂಡಿದೆ. ಅವರು ತಮ್ಮ ಬರವಣಿಗೆಯಲ್ಲಿ ಪ್ರತಿಪಾದಿಸುತ್ತಾ ಬಂದ ಸರಳ ಸುಸ್ಥಿರ ಬದುಕನ್ನೇ ನಡೆಯಲ್ಲೂ ಪಾಲಿಸುತ್ತಿದ್ದಾರೆ. ಇವರ ಜೀವನ ಶೈಲಿ ಪ್ರಸ್ತುತ ಆಧುನಿಕ ಮತ್ತು ಯಾಂತ್ರಿಕ ಜಗತ್ತಿನಲ್ಲಿ ಪ್ರತಿಯೊಬ್ಬರಿಗೂ ಮಾದರಿಯಾಗಿದೆ. ಅದು ಅನಿವಾರ್ಯವು ಹೌದು. ಇದುವರೆಗೂ ಅವರು ಬರೆದ ಅಂಕಣ ಬರಹಗಳು ಸಂಕಲನ ರೂಪದಲ್ಲಿ ಸುಮಾರು ೨೫ಕ್ಕೂ ಹೆಚ್ಚು ಕೃತಿಗಳಾಗಿ ಪ್ರಕಟವಾಗಿವೆ. ಇಂದಿಗೂ ಪ್ರಜಾವಾಣಿ ಪತ್ರಿಕೆಯಲ್ಲಿ ಬರೆಯುತ್ತಿರುವ 'ವಿಜ್ಞಾನ ವಿಶೇಷ' ಎಂಬ ಶೀರ್ಷಿಕೆಯ ಅಂಕಣ ಬರಹಗಳು ಕನ್ನಡ ಸಾಹಿತ್ಯದ ವೈವಿಧ್ಯತೆಗೆ ಸಾಕ್ಷಿಯಾಗಿದೆ ಹಾಗೂ ಕನ್ನಡ ಓದುಗ ಬಳಗಕ್ಕೆ ಬಹಳ ಪ್ರಯೋಜನವಾಗುತ್ತಿದೆ.

೫) **ಚಂದ್ರಶೇಖರ ನಂಗಲಿ:** ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಲೇಖಕರಲ್ಲಿ ಒಬ್ಬರಾದ ಇವರು ಕನ್ನಡದ ಪ್ರಮುಖ ಪರಿಸರ ಬರಹಗಾರರು. ಮೂಲತಃ ಪ್ರಾಧ್ಯಾಪಕರಾದ ಇವರು ವಿಜ್ಞಾನದಲ್ಲಿ ಅತೀವ ಆಸಕ್ತಿ ಬೆಳೆಸಿಕೊಂಡಿದ್ದಾರೆ. ಸೃಜನಶೀಲ ಸಾಹಿತ್ಯ ಪ್ರಕಾರಗಳಾದ ಕತೆ, ಕಾದಂಬರಿ, ನಾಟಕ ಮತ್ತು ಸಾಹಿತ್ಯ ವಿಮರ್ಶೆಯೊಂದಿಗೆ ಪರಿಸರ ಸಾಹಿತ್ಯ ಪ್ರಕಾರದಲ್ಲೂ ತಮ್ಮ ಛಾಪು ಮೂಡಿಸಿದ್ದಾರೆ. ಪರಿಸರ ಕುರಿತು ಪ್ರಕಟವಾದ ಇವರ ಮುಖ್ಯ ಕೃತಿ 'ಕಾಡು ಮತ್ತು ತೋಪು'.

೬) **ಟಿ.ಎಸ್.ವಿವೇಕಾನಂದ:** ಟಿ.ಎಸ್. ವಿವೇಕಾನಂದ ಅವರು ಕಳೆದ ಎರಡೂವರೆ ದಶಕಗಳಿಂದ ಪರಿಸರ ಶಿಕ್ಷಣ/ಸಂರಕ್ಷಣೆ ಕ್ಷೇತ್ರದಲ್ಲಿ ತೊಡಗಿಸಿಕೊಂಡವರು ಮೂಲತಃ ಸಮಾಜ ಸಾಸ್ತ್ರದ ವಿದ್ಯಾರ್ಥಿಯಾದ ಇವರು ಯಶಸ್ವಿ ಪತ್ರಕರ್ತರಾಗಿದ್ದಾಗಲೇ ವೃತ್ತಿ ಪತ್ರಿಕೋದ್ಯಮದಿಂದ ಹೊರಬಂದು ಪರಿಸರ ಕ್ಷೇತ್ರದ ಸಾಮಾಜಿಕ ನಿರ್ಲಕ್ಷ್ಯಗಳನ್ನು ಜನರ ಮುಂದಿಟ್ಟರು. ಭಾರತೀಯ ಪರಿಸರವಾದದ ಸೊಗಲಾಡಿತನವನ್ನು ಬಿಚ್ಚಿಡುತ್ತಲೇ ಪರಿಸರ ಸಂರಕ್ಷಣೆಗೆ ಹೊಸದೊಂದು ಜನಪರ ಆಯಾಮವನ್ನು ಸೃಷ್ಟಿಸಿದ್ದರು. ಈ ನಿಟ್ಟಿನಲ್ಲಿ ಇವರು ಇಟ್ಟ ಅನೇಕ ದಿಟ್ಟ ಹೆಜ್ಜೆಗಳು ಭಾರತೀಯ ಪರಿಸರವಾದದಲ್ಲಿ ಮಹತ್ವದ ಮೈಲುಗಲ್ಲುಗಳಾಗಿವೆ.

ಈ ಎಲ್ಲಾ ಸಂವೇದನಾಶೀಲ ಪರಿಸರ ಕಥನಕಾರರ ಜೀವನ ಸಾಧನೆಯನು ಈ ಮೂರನೆಯ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗುತ್ತದೆ.

**ಅಧ್ಯಾಯ – ೪ : ಪರಿಸರ ಕಥನಗಳ ವಿಶ್ಲೇಷಣೆ**

ಆಧುನಿಕ ಕನ್ನಡ ಸಾಹಿತ್ಯದ ವಿಶೇಷ ಪ್ರಜ್ಞೆಯ ಪ್ರಾತಿನಿಧಿಕ ರೂಪದಲ್ಲಿ ನಮಗೆ ಹಲವು ಪರಿಸರ ಕಥನಗಳು ಕಾಣಸಿಗುತ್ತವೆ. ನವೋದಯದ ಕಾಲಘಟ್ಟದಲ್ಲಿ 'ಪ್ರಕೃತಿ ಆರಾಧನೆ'ಯು ಒಂದು ಪ್ರಮುಖ ನೆಲೆಯಾಗಿ ಅನಾವರಣಗೊಳ್ಳುತ್ತಾ, ಪರಿಸರ ಕಥನಗಳ ಸೃಷ್ಟಿಗೆ ಬುನಾದಿಯನ್ನು ಒದಗಿಸಿತು. ಆದರೂ ಅಲ್ಲಿಂದ ಆರಂಭವಾಗಿ ಇದುವರೆಗಿನ ನೂರಕ್ಕೂ ಮಿಕ್ಕಿದ ವರ್ಷಗಳಲ್ಲಿ ಸೃಷ್ಟಿಯಾದ ಪರಿಸರ ಕಥನಗಳ ಸಂಖ್ಯೆ ಬೆರಳೆಣಿಕೆಯಷ್ಟಾಗಿದೆ. ನಮ್ಮ ಸಮಾಜದ ಬಡತನ, ಹಸಿವು, ಜಾತಿಸಮಸ್ಯೆ, ಅಸ್ಪೃಶ್ಯತೆ, ಲಿಂಗಭೇದ ಇವುಗಳ ಚರ್ಚೆಯ ನಡುವೆ ಸಮಗ್ರ ಪ್ರಕೃತಿಯ ಅಳಿವು–ಉಳಿವಿನ ಪ್ರಶ್ನೆ ಅಷ್ಟಾಗಿ ಇಲ್ಲಿನ ಬರಹಗಾರರಿಗೆ ಕಾಡಿದಂತಿಲ್ಲ.

ಆದರೂ ಕುವೆಂಪು ಅವರಂಥ ದಾರ್ಶನಿಕ ಕವಿಗಳು 'ಮಲೆನಾಡಿನ ಚಿತ್ರಗಳು' ಕೃತಿಯನ್ನು ರಚಿಸಿದ ತರುವಾಯ ಅದೇ ಮಾದರಿಯನ್ನು ಅನುಸರಿಸಿ ಕನ್ನಡದಲ್ಲಿ ಹಲವು ಕೃತಿಗಳು ರಚನೆಯಾಗಿವೆ. ಈಗಾಗಲೇ ಸೂಚಿಸಿದ ಬಿ.ಜಿ.ಎಲ್.ಸ್ವಾಮಿ, ತೇಜಸ್ವಿ, ನಂಗಲಿ,

ನಾಗೇಶ್ ಹೆಗಡೆ, ವಿವೇಕಾನಂದರ ಕೃತಿಗಳು ಕನ್ನಡದ ಪ್ರಮುಖ ಪರಿಸರ ಕಥನಗಳಾಗಿವೆ. ಈ ಪ್ರಮುಖ ಕೃತಿಗಳಲ್ಲಿ ನಮ್ಮ ಪರಿಸರ ಪ್ರಜ್ಞೆಯ ಲೇಖಕರು ಇಡೀ ಜೀವಲೋಕವನ್ನು ಗ್ರಹಿಸಿರುವ ರೀತಿಯನ್ನೂ, ಅದನ್ನು ಕನ್ನಡ ಓದುಗಲೋಕ ಸ್ವೀಕರಿಸಿರುವ ರೀತಿಯನ್ನೂ ಈ ಭಾಗದಲ್ಲಿ ಚರ್ಚೆಗೆತ್ತಿಕೊಳ್ಳಲಾಗುತ್ತದೆ.

ಪರಿಸರ ಎಂದರೇನು? ಅದರ ಸೌಂದರ್ಯ ಮತ್ತು ಕರಾಳ ಮುಖಗಳ ದರ್ಶನ ಈ ಕೃತಿಗಳಲ್ಲಿ ಮೂಡಿರುವ ರೀತಿ ಯಾವುದು? ಪರಿಸರ ರಕ್ಷಣೆಯ ಪ್ರಜ್ಞೆ ಮೂಡಬೇಕಾದ ತುರ್ತಾದರೂ ಏನು? ನಮ್ಮ ಜೀವಪರಿಸರದ ನಿಗೂಢ ಸತ್ಯಗಳನ್ನು ಈ ಲೇಖಕರು ಹೇಗೆ ಅನಾವರಣಗೊಳಿಸಿದ್ದಾರೆ? ಪ್ರಪಂಚದ ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಆಗುಹೋಗುಗಳ ಜೊತೆಗಿನ ಪರಿಸರದ ಸಂಬಂಧ ಎಂಥದು? ಪರಿಸರ ಮಾಲಿನ್ಯ, ಪರಿಸರ ನಾಶ ಮುಂತಾದ ಘೋರ ಕೃತ್ಯಗಳನ್ನು ಎಸಗುತ್ತಿರುವ ಮನುಷ್ಯರನ್ನು ಈ ವಿಷಯದಲ್ಲಿ ಪ್ರಜ್ಞಾವಂತರಾಗಿಸುವುದು ಹೇಗೆ? ಅದನ್ನು ನಮ್ಮ ಈ ಲೇಖಕರು ಕಥನಾತ್ಮಕವಾಗಿ ಮುಟ್ಟಿಸುತ್ತಿರುವ ರೀತಿ ಯಾವ ಸ್ವರೂಪದ್ದು? ಮೊದಲಾದ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತ ಅದನ್ನು ಪ್ರಸ್ತುತ ಅಧ್ಯಾಯದಲ್ಲಿ ವಿವರವಾಗಿ ವಿಶ್ಲೇಷಿಸಲಾಗುತ್ತದೆ.

**ಅಧ್ಯಾಯ – ೫ : ಪರಿಸರ ಕಥನಗಳಲ್ಲಿನ ತಾತ್ತ್ವಿಕತೆಯ ತೌಲನಿಕ ನೋಟ**

ಭೂಮಿಯ ಮೇಲಿನ ಪ್ರತಿಯೊಂದು ಜೀವಿಗೂ ತನ್ನದೇ ಆದ ನೈಸರ್ಗಿಕ ಆವರಣ ಇರುತ್ತದೆ. ಅದು ಆ ಜೀವಿಯ ಜೀವನದ ಆಗುಹೋಗುಗಳಿಗೆ ಪೂರಕವಾದ ನೆಲೆಯನ್ನು ಒದಗಿಸಿರುತ್ತದೆ. ಅಂಥ ನೆಲೆಯಿಂದ ಪ್ರತ್ಯೇಕಿಸಲ್ಪಡುವ ಜೀವಿಗಳು ನಾಶದ ದಾರಿಯನ್ನು ಹಿಡಿಯುತ್ತಿವೆ. ಇಂಥ ನೈಸರ್ಗಿಕ ಆವರಣವನ್ನು ಇತ್ತೀಚೆಗೆ ಜೀವಪರಿಸರ ಎಂದು ಕರೆಯಲಾಗುತ್ತಿದೆ. ಅದು ಇಂಗ್ಲೀಷಿನ 'Ecology' ಶಬ್ದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ ಬಳಕೆಯಾಗುತ್ತಿದೆ. ಅದರ ಪ್ರಕಾರ ಭೂಮಿಯ ಮೇಲೆ ವಾಸಿಸುವ ಎಲ್ಲ ಬಗೆಯ 'ಚರ' ಮತ್ತು 'ಅಚರ' ಸಮೂಹಗಳ ಜೀವನಚಕ್ರವನ್ನು ಜೀವಪರಿಸರವಾಗಿ ಗುರುತಿಸಲಾಗುತ್ತದೆ. ಆ ಕುರಿತು ಕೈಗೊಳ್ಳುವ ವಿಶೇಷ ಅಧ್ಯಯನ ವಿಭಾಗವೇ ಜೀವವಿಜ್ಞಾನವಾಗಿದೆ.

ಈ ರೀತಿ ಜೀವಲೋಕವನ್ನು ಕುರಿತು ತೊಡಗುವ ಅಧ್ಯಯನವು ಮನುಷ್ಯಕೇಂದ್ರಿತ ಚಿಂತನೆಯನ್ನು ಅಂಚಿಗೆ ಸರಿಸುತ್ತವೆ. ಇಲ್ಲಿನ ಜೀವಕೋಟಿಗಳಲ್ಲಿ ಮನುಷ್ಯರು ಮಾತ್ರ ಪ್ರಬಲವಾಗಿ ಉಳಿದ ಜೀವಸಮೂಹ ಅದರ ಅಧೀನವಾಗಿರುವ ವ್ಯವಸ್ಥೆಯನ್ನು ಕಡೆಗಣಿಸುತ್ತವೆ. ಮನುಷ್ಯರ ಲೋಭಮೂಲವಾದ ಭೋಗಸಿದ್ಧಾಂತವನ್ನು ಧಿಕ್ಕರಿಸುತ್ತವೆ. ಪ್ರಕೃತಿಯ ಸಾನ್ನಿಧ್ಯದಲ್ಲಿ ಸರ್ವಜೀವಿವರ್ಗವನ್ನೂ ಸಮನಾಗಿ ಕಾಣುವ ಸಿದ್ಧಾಂತವನ್ನು ಪ್ರತಿಪಾದಿಸುತ್ತವೆ.

ಹಿಂದೆ ಗುರುತಿಸಿದ ಕನ್ನಡದ ಪ್ರಮುಖ ಪರಿಸರ ಕಥನಗಳು ಜೀವಿಗಳ ಜೀವನಚಕ್ರವನ್ನು ಚಿತ್ರಿಸುವ ಕ್ರಮದಲ್ಲೇ ಮೇಲ್ಕಂಡ ಅಧ್ಯಯನದ ತಾತ್ತ್ವಿಕತೆಯನ್ನು ಪ್ರತಿಪಾದಿಸುತ್ತವೆ. ಒಂದೆಡೆ ಪರಿಸರವನ್ನು ನಿರ್ಲಕ್ಷಿಸುವ, ಇನ್ನೊಂದೆಡೆ ಅದನ್ನು ಹಾಳುಗೆಡಹುವ ಮನುಷ್ಯನ ದುರಾಸೆಯನ್ನು ದಿಟ್ಟವಾಗಿ ವಿರೋಧಿಸುತ್ತವೆ. ಆ ಮೂಲಕ ಹೆಚ್ಚಾಗುತ್ತಿರುವ ಅಸಮತೋಲನದ ಪ್ರಶ್ನೆಯನ್ನು ಓದುಗರ ಎದುರು ತೆರೆದಿಡುತ್ತವೆ. ಪರಿಸರ ಮಾಲಿನ್ಯದ ಜೊತೆಗೆ ಅದನ್ನು ಆಳುವ ಮನಸ್ಥಿತಿಯನ್ನು ದೂರೀಕರಿಸುವ ಕಡೆಗೆ ನಮ್ಮನ್ನು ಕೊಂಡೊಯ್ಯುತ್ತವೆ.

ನಮ್ಮ ಪರಿಸರ ಕಥನಗಳು ಮಂಡಿಸುವ ತಾತ್ತ್ವಿಕತೆಗಳು ಒಂದಕ್ಕಿಂತ ಮತ್ತೊಂದು ಭಿನ್ನವಾಗಿವೆ. ಆದರೆ ಅವೆಲ್ಲವುಗಳ ಗುರಿ ಒಂದೇ ಆಗಿದೆ. ಅದೆಂದರೆ ಮನುಷ್ಯ ತನ್ನ ಅಸ್ತಿತ್ವವನ್ನು ಸರಿಯಾದ ನೆಲೆಯಲ್ಲಿ ಅರ್ಥೈಸಿಕೊಳ್ಳುವುದು ; ಪ್ರಕೃತಿಯ ಸಹಕಾರವಿಲ್ಲದೆ ತಮ್ಮ ಬದುಕು ಹಸನಾಗದು ಎಂದು ಅರಿಯುವುದು ಇಂದಿನ ತುರ್ತಾಗಿದೆ. ಅದನ್ನು ಪ್ರಸ್ತುತ ಕೊನೆಯ ಅಧ್ಯಾಯದಲ್ಲಿ ತೌಲನಿಕ ಅಧ್ಯಯನದ ಮಾದರಿಯಲ್ಲಿ ವಿವರವಾಗಿ ವಿಶ್ಲೇಷಣೆಗೆ ಒಳಪಡಿಸಲಾಗುತ್ತದೆ. ಕನ್ನಡದ ಪರಿಸರ ಅಧ್ಯಯನಕ್ಕೆ ಈ ಕೃತಿಗಳು ನಿಜವಾಗಿ ಕೊಟ್ಟಿರುವ ಕಾಣ್ಕೆಗಳು ಯಾವುವು ಎಂಬುದನ್ನು ಪರಿಶೀಲಿಸಲಾಗುತ್ತದೆ. ಆ ದಿಕ್ಕಿನಲ್ಲಿ ಈ ಕಥನಗಳ ಸರಿಯಾದ ಸ್ಥಾನಮಾನವನ್ನು ನಿರ್ಧರಿಸಲಾಗುತ್ತದೆ.

**ಅಧ್ಯಾಯ – ೬ : ಸಮಾರೋಪ**

ಸಾಹಿತ್ಯದ ಹಲವಾರು ಪ್ರಕಾರಗಳಾದ ಕತೆ, ಕಾದಂಬರಿ, ಕಾವ್ಯ, ವಿಮರ್ಶೆ ಹೀಗೆ ಅನೇಕ ಕ್ಷೇತ್ರದಲ್ಲಿ ಲೇಖಕರು ಸಾಹಿತ್ಯ ಕೈಂಕರ್ಯವನ್ನು ನಡೆಸಿದ್ದಾರೆ. ಆದರೆ ಪರಿಸರ ಕಥನವನ್ನು ಕುರಿತು ವಿಷಯವನ್ನು ಮಂಡಿಸಿದವರ ಸಂಖ್ಯೆ ಬಹಳ ವಿರಳ ಅನ್ನುವಷ್ಟಿದೆ. ಹಾಗಿದ್ದರೂ ಕೆಲವರು ಪರಿಸರ ಅಧ್ಯಯನ ಹಾಗೂ ಕಥನಗಳ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಅರಣ್ಯಗಳಿಗೆ ಭೇಟಿ ನೀಡಿ ತಮ್ಮ ಅನುಭವಗಳ ಜೊತೆಗೆ ಜೀವ ಪರಿಸರದ ಚಲನವಲನಗಳ ಬಗ್ಗೆ ಸೂಕ್ಷ್ಮವಾಗಿ ಚರ್ಚಿಸಿದ್ದಾರೆ. ಈ ಮೂಲಕ ಪರಿಸರದ ಬಗ್ಗೆ ಅಧ್ಯಯನ ಮಾಡುವವರಿಗೆ ಮಾರ್ಗದರ್ಶಕರಾಗಿ ಕಂಡುಬರುತ್ತಾರೆ.

ನಮ್ಮ ಇತ್ತೀಚಿನ ಪರಿಸರವು ನಗರೀಕರಣ, ಜಾಗತೀಕರಣ, ಖಾಸಗೀಕರಣ, ಯಾಂತ್ರೀಕರಣ, ಕೈಗಾರೀಕರಣ, ಕಾಡಿನ ನಾಶ, ಬರಗಾಲ, ಪ್ರವಾಹಗಳಿಂದ ದಿನದಿನಕ್ಕೂ ಕಲುಷಿತಗೊಳ್ಳುತ್ತಿದೆ. ಪ್ರತಿಯೊಂದು ಪ್ರಕೃತಿ ಜೀವಿಯೂ ಸಹ ವಿನಾಶದ ಅಂಚಿನತ್ತ ಸಾಗುತ್ತಿದೆ. ಈ ಸಂದರ್ಭದಲ್ಲಿ ಪರಿಸರ ಕಥನಗಳ ಅಧ್ಯಯನ ಮಾಡುವುದರಿಂದ ನಮ್ಮಲ್ಲಿ ಪರಿಸರ ಪ್ರಜ್ಞೆಯು ಮೂಡುತ್ತದೆ. ನಮ್ಮನ್ನು ನಿಸರ್ಗಮುಖಿಗಳನ್ನಾಗಿ ಮಾಡುತ್ತದೆ.

ಪ್ರಕೃತಿಯ ಬಗೆಗಿನ ವಿಶೇಷವಾದ ಆರಾಧಕರನ್ನು ಸೃಷ್ಟಿಮಾಡುತ್ತದೆ. ಪ್ರತಿಯೊಂದು ಪರಿಸರ ವಸ್ತುವಿಗೂ ಜೀವವಿದೆ, ದೈವಾಂಶವಿದೆ ಎಂಬುದನ್ನು ತಿಳಿಸುತ್ತದೆ.

## ಕೊನೆಟಿಪ್ಪಣಿಗಳು

೧. ಕೀರ್ತಿನಾಥ ಕುರ್ತಕೋಟಿ : ಯುಗಧರ್ಮ ಹಾಗೂ ಸಾಹಿತ್ಯದರ್ಶನ, ಮನೋಹರ ಗ್ರಂಥಮಾಲಾ – ಧಾರವಾಡ, ೨೦೦೨, ಪು. ೧–೩.

೨. ಸುಮಿತ್ರ.ಪಿ.ಎಚ್ : ಕನ್ನಡ ಸಾಹಿತ್ಯ ಕೃಷಿ ವಿಕಾಸ್ ಪಬ್ಲಿಕೇಷನ್ಸ್, ಬೆಂಗಳೂರು.

೩. 'ತನು ಕರಗದವರಲ್ಲಿ', ಮುನ್ನುಡಿ, ಪು. vi

*****

# ಅಧ್ಯಾಯ – ೨

# ಕನ್ನಡದ ಪರಿಸರ ಕಥನಗಳ ಇತಿಹಾಸ ಹಾಗೂ ಮಹತ್ವ

ಕನ್ನಡ ಸಾಹಿತ್ಯವು ಭಾರತೀಯ ಸಾಹಿತ್ಯದ ಇತಿಹಾಸದಲ್ಲಿ ಒಂದು ಮಹತ್ವಪೂರ್ಣ ಸ್ಥಾನವನ್ನು ಅಲಂಕರಿಸಿದೆ. ಹಾಗೆಯೇ ವಿವಿಧ ಭಾಷಾಸಾಹಿತ್ಯಕ್ಕೆ ಮಾದರಿಯಾಗಿದೆ. ಪ್ರಾಚೀನ ಕಾಲದಿಂದ ಇಂದಿನವರೆಗೂ ಸಾಹಿತ್ಯ ಕ್ಷೇತ್ರದಲ್ಲಿ ತನ್ನದೇ ವಿಶಿಷ್ಟ ಆಯಾಮಗಳಲ್ಲಿ ಈ ಸಾಹಿತ್ಯ ತೆರೆದುಕೊಂಡು ವಿಕಾಸ ಹೊಂದಿದೆ. ಉದ್ದಕ್ಕೂ ಅದು ಜೀವಪರವಾದ ಮೌಲ್ಯವನ್ನು ವೈಜ್ಞಾನಿಕವಾಗಿ ಹಾಗೂ ವೈಚಾರಿಕ ಪ್ರಜ್ಞೆಯ ನೆಲೆಯಲ್ಲಿ ತಿಳಿಸುತ್ತಾ ಬಂದಿದೆ.

ಕನ್ನಡ ಸಾಹಿತ್ಯದಲ್ಲಿ ಪ್ರಕೃತಿಯ ವೈವಿಧ್ಯಮಯ ಸಂಪ್ರದಾಯಬದ್ಧ ರೀತಿಯ ನಾನ ವರ್ಣನೆಗಳನ್ನು ಕಾಣುತ್ತೇವೆ. ಅಷ್ಟಾದಶ ವರ್ಣನೆಯ ಅಂಗವಾಗಿ ಪ್ರಕೃತಿಯ ವರ್ಣನೆಯನ್ನು ಹಿಂದಿನ ಕವಿಗಳು ಮಾಡಿದ್ದರೂ ಕೆಲವೇ ಕೆಲವು ಪ್ರತಿಭಾಶಾಲಿ ಕವಿಗಳು ತಮ್ಮ ಅಗಾಧಶಕ್ತಿಯನ್ನು ಬಳಸಿಕೊಂಡು ಉತ್ತಮ ರೀತಿಯ ಸೃಜನಶೀಲ ವರ್ಣನೆ ಮಾಡಿ ಸಾಹಿತ್ಯದ ಸೊಬಗನ್ನು ಶ್ರೀಮಂತಗೊಳಿಸಿದ್ದಾರೆ.

ಅಷ್ಟಾದಶ ವರ್ಣನೆಯ ಸಂದರ್ಭದಲ್ಲಿ ಬರುವ ಪ್ರಕೃತಿ ವರ್ಣನೆಗಳಲ್ಲಿ ಹೆಚ್ಚಿನವು ಬಹಳಷ್ಟು ಯಾಂತ್ರಿಕ ಹಾಗೂ ನೀರಸದಿಂದ ಕೂಡಿರುವುದು ತಿಳಿಯಬಹುದು. ಕಾವ್ಯವನ್ನು ರಚಿಸುವಾಗ ಅಷ್ಟಾದಶ ವರ್ಣನೆಯ ಅವಶ್ಯಕತೆ ಇರಲಿ ಅಥವಾ ಇಲ್ಲದಿರಲಿ, ಲಾಕ್ಷಣಿಕರು ಹೇಳಿದ ಹದಿನೆಂಟು ವರ್ಣನೆಯನ್ನು ಸಂದರ್ಭಕ್ಕೆ ತಕ್ಕಂತೆ ಕಾವ್ಯದಲ್ಲಿ ಸೇರಿಸಲೇಬೇಕಿತ್ತು. ಅದರ ನಿಯಮವನ್ನು ಮೀರಿದರೆ ಆ ಸಾಹಿತ್ಯಕ್ಕೆ ಮಾನ್ಯತೆ ದೊರೆಯುತ್ತಿರಲಿಲ್ಲ. ಆದ್ದರಿಂದ ಆ ಸಂಪ್ರದಾಯಕ್ಕೆ ಶರಣಾಗಿದ್ದರು, ಇಂತಹ ನಿರ್ಬಂಧದ ನಡುವೆಯೂ ತಮ್ಮ ಪ್ರತಿಭಾಶಕ್ತಿಯನ್ನು ಮೆರೆದು ಕನ್ನಡ ಸಾಹಿತ್ಯವನ್ನು ವೃದ್ಧಿಸಿದ್ದಾರೆ.

ಯಾವುದೇ ನಿರ್ಬಂಧಗಳಿಲ್ಲದೆ ಸಂಪೂರ್ಣ ಸ್ವತಂತ್ರವಾಗಿ ಪ್ರಕೃತಿ ವರ್ಣನೆ ಮಾಡಿರುವುದನ್ನು ನೋಡಬೇಕಾದರೆ ಇಪ್ಪತ್ತನೆಯ ಶತಮಾನದ ನವೋದಯ ಸಾಹಿತ್ಯಕ್ಕೆ ಬರಬೇಕಾಗುತ್ತದೆ. ಈ ಕಾಲಘಟ್ಟದ ಕವಿಗಳು ಯಾವುದೇ ಲಾಕ್ಷಣಿಕರ, ರಾಜಮಹಾರಾಜರ ಅಧೀನಕ್ಕೆ ಒಳಗಾಗದೆ ಸಂಪೂರ್ಣ ಸ್ವತಂತ್ರವಾಗಿ ಸಾಹಿತ್ಯವನ್ನು ರಚಿಸಿ ತಮ್ಮ ಅನುಭವ, ಅಭಿವ್ಯಕ್ತಿಗೆ ತಕ್ಕಂತೆ ವರ್ಣನೆ ಮಾಡಿರುವುದನ್ನು ನೋಡಬಹುದು.

## ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಪ್ರಕೃತಿ

**ಅಷ್ಟಾದಶ ವರ್ಣನೆಯ ಅಂಗವಾಗಿ ಪ್ರಕೃತಿ:** ಅಷ್ಟಾದಶ ವರ್ಣನೆಯ ಅಂಗವಾಗಿ ಪ್ರಕೃತಿಯ ವೈವಿಧ್ಯಮಯ ಸಂಪ್ರದಾಯಬದ್ಧ ರೀತಿಯ ಹಲವು ವರ್ಣನೆಗಳನ್ನು ಕಾಣುತ್ತೇವೆ. ಇಂತಹ

ಸಂದರ್ಭದಲ್ಲಿ ಪ್ರಕೃತಿ ಕುರಿತಾದ ನೈಜ ಸ್ವರೂಪ ಇರಲೇಬೇಕಾಗಿರಲಿಲ್ಲ. ಅಂತಹ ವರ್ಣನೆಗೆ ಲಾಕ್ಷಣಿಕರ ನಿರ್ಬಂಧವೇ ಮುಖ್ಯ ಕಾರಣವಾಗಿತ್ತು. ಈ ರೀತಿಯ ಕಟ್ಟುಪಾಡುಗಳಿಂದ ಕನ್ನಡ ಸಾಹಿತ್ಯ ಹೊಸತನವಿಲ್ಲದೆ ಸೊರಗಿತ್ತು.

ಡಿ.ಎಲ್.ಎನ್ ಅವರು ಹೇಳುವಂತೆ, "ಲಾಕ್ಷಣಿಕರ ನಿರ್ಬಂಧವು ಚಿನ್ನದ ಸಂಕೋಲೆಯೇ ಆಗಿದೆ".[೧] ಕನ್ನಡ ಸಾಹಿತ್ಯವನ್ನು ಗಮನಿಸಿದ್ದರೆ ಅವರು ಮಾಡಿರುವ ಕಟ್ಟುಪಾಡುಗಳು ಅತ್ಯಂತ ಅವಶ್ಯಕವಾದುದೆನಿಸುತ್ತವೆ. ಆದರೆ ಅದರ ಅಂತರಾಳಕ್ಕೆ ಇಳಿದು ನೋಡಿದರೆ ಅದರಲ್ಲಿ ತಿರುಳಿಲ್ಲ ಇಂತಹ ಕಟ್ಟುಪಾಡುಗಳಿಂದ ಕನ್ನಡ ಸಾಹಿತ್ಯದಲ್ಲಿ ಹೊಸತನವಿಲ್ಲದೆ ಬಡವಾಗಿತ್ತು. ಹೀಗೆ ಪರಂಪರಾನುಗತವಾಗಿ ಬಂದ ಹಲವು ನಿರ್ಬಂಧಗಳು ಕವಿಯ ಸೃಜನಶೀಲತೆಗೆ ಧಕ್ಕೆ ತಂದು ಅವರು ಹೊಸ ರೀತಿಯಲ್ಲಿ ಯೋಚಿಸಲು ಮತ್ತು ಸ್ವತಂತ್ರವಾಗಿ ಕೃತಿ ರಚಿಸಲು ಅಡ್ಡಿಯಾದದ್ದು ನಿಜ ಎಂಬುದನ್ನು ಮನದಲ್ಲಿ ಅರಿಯಬೇಕಾಗುತ್ತದೆ.

ಉದಿಯಾದಿತ್ಯ ಎಂಬ ಲಾಕ್ಷಣಿಕನ ಪ್ರಕಾರ ಅಷ್ಟಾದಶ ವರ್ಣನೆ ಎಂದರೆ,

**ಉದಧಿ ಪುರಾದಿಪ ಸುರ ಮಂತ್ರಿ**
**ತ್ರಿ ದೂತ ಗಮನಾಜಿ ವಿರಹ ಪರಿಣಯ ಸುರತ**
**ರ್‍ತು ದಿನೇಶ ಚಂದ್ರ ಮಧು ಕುಭೃ**
**ದುದಕ ವನಸ್ಪತಿಯ ಕೃತಿಗೆ ಪದಿನೆಂಟಂಗಂ**[೨]

**ಕಾಡು ಕಡಲಿನ ವರ್ಣನೆ:** ಕಾಡಿನ ರುದ್ರ ರಮಣೀಯತೆ ಭವ್ಯತೆಯ ಎದುರು ಮಾನವ ತನ್ನ ಕುಬ್ಜತನವನ್ನು ಅರಿಯುತ್ತಾನೆ. ಪ್ರಾಚೀನ ಕನ್ನಡ ಕವಿಗಳು ತಾವು ಕಂಡ ಬೆಟ್ಟಗುಡ್ಡ, ಮರಗಿಡ, ಹೂಬಳ್ಳಿಗಳು ಹುಲ್ಲಿನ ಪೊದೆಗಳು ವನ್ಯಮೃಗಗಳು, ಪ್ರಾಣಿಪಕ್ಷಿಗಳು ಮುಂತಾದವುಗಳನ್ನು ತಾನು ಕಂಡಂತೆ ಸಹಜವಾಗಿ ವರ್ಣಿಸದೆ ಶ್ರೀಶೈಲ ಪರ್ವತವನ್ನು ಅನುಸರಿಸಿರುವುದು ಕಂಡುಬರುತ್ತದೆ. ಕವಿ ತಾನು ವರ್ಣಿಸುತ್ತಿರುವುದು ತನ್ನ ಸುತ್ತಮುತ್ತಲೂ ಇರುವ ಬೆಟ್ಟಗುಡ್ಡ ಕಾಡುಗಳು ಎಂದು ನಮಗೆ ಮನದಟ್ಟು ಮಾಡಲು ತಪ್ಪಿದ್ದಾನೆ. ತಾನು ಕಂಡ ಅರಣ್ಯದ ರೌದ್ರ ಸೌಂದರ್ಯದ ನಿಜಸ್ಥಿತಿಯನ್ನು ಏಕೆ ಚಿತ್ರಿಸದೆ ಹೋದರೋ ಎನ್ನುವುದಕ್ಕೆ ಉತ್ತರವಿಲ್ಲದಂತಾಗಿದೆ. ಅದು ಕೃತಕವಾಗಿದ್ದು ಚಿತ್ರ ವಿಚಿತ್ರ ವಸ್ತುಗಳ ಒಂದು ಸಮೂಹವಾಗಿ ಕಂಡುಬರುತ್ತದೆ.

'ವಿಕ್ರಮಾರ್ಜುನ ವಿಜಯ'ದಲ್ಲಿ ಪಂಪ ಅರಣ್ಯದ ರೌದ್ರ ಸೌಂದರ್ಯವನ್ನು ಹೀಗೆ ವರ್ಣಿಸಿದ್ದಾನೆ.

'ಅದು ಮದದಂತಿ ದಂತ ಮುಸಲ ಪ್ರವಿಭಗ್ನ ಮಹಾಮಹೀರುಹಾ ಸ್ಪದಮ್
ಅದು ಸಿಂಹನಾದ ಜನಿತ ಪ್ರತಿಶಬ್ದ ಮಹಾ ಭಯಾನಕ ಪ್ರದಮ್
ಅದು ನಿರ್ಝರೋಚ್ಚಳಿತ ಶೀಕರ ಶೀಕಳವಾತ ನರ್ತಿತೋ
ನ್ಮದ ಶಬರೀ ಜನಕಳಾಮ್ ಅದು ಆಯುತ ವೇತ್ರಲತಾ ವಿತಾನಕಂ[3]

ಮದವೇರಿದ ಆನೆಯ ಮುಸಲ ಸದೃಶವಾದ ದಂತದಿಂದ ಭಗ್ನವಾದ ದೊಡ್ಡ ದೊಡ್ಡ ಮರಗಳು ಸಿಂಹನಾದದಿಂದ ಉಂಟಾದ ಪ್ರತಿಶಬ್ದಗಳಿಂದ ಮಹಾ ಭಯಾನಕ ಆವರಣ ನಿರ್ಝರಿಣಿಯ ಶೀಕರದಿಂದ ಶೀತವಾದ ತಂಗಾಳಿಯಿಂದ ಕುಣಿವ ಮುಂಗುರುಳುಳ್ಳ ಬೇಡರ ವಿಶಾಲವಾದ ಬೆತ್ತಬಿದಿರದ ಕಾಡು ಎನ್ನುವ ಹಲವಾರು ಚಿತ್ರಗಳನ್ನು ಬಣ್ಣಿಸಿದ್ದಾನೆ.

ವನಸ್ಪತಿಗಳಲ್ಲಿ ಕವಿಗಳ ವಿಶೇಷ ಆದರಕ್ಕೆ ಪಾತ್ರವಾದ ಮಾವಿನ ಮರವನ್ನು ವರ್ಣಿಸಬೇಕಾದರೆ ಕೋಗಿಲೆಯ ಇಂಚರ, ದುಂಬಿಗಳ ಝೇಂಕಾರ, ಗಿಳಿಗಳ ಹಿಂಡು ಮುಂತಾದವನ್ನು ದರ್ಶಿಸಿ ನಂತರ ಮಾವಿನ ಮರವನ್ನು ವರ್ಣಿಸಬೇಕಿತ್ತು. ಹಾಗೆ ನೋಡಿದರೆ ಮಾವಿನ ಮರದ ವ್ಯಕ್ತ ಸೌಂದರ್ಯವನ್ನು ವರ್ಣಿಸುವ ಪಂಪನಿಗೆ ಅದು ಚೈತನ್ಯಶೀಲವಾಗಿ ಕಾಣುತ್ತದೆ ಹಾಗೂ ಅಂತಃಪ್ರೇರಣ ಶಕ್ತಿಯುಳ್ಳದ್ದಾಗಿಯೂ ಕಾಣಿಸುತ್ತದೆ. ಆದ್ದರಿಂದ,

ತಳಿರೊಳ್ ನೀನೆ ಬೆಡಂಗನೈ ನನೆಗಳೊಳ್ ನೀಂ ನೀಟನೈ ಪುಷ್ಪ ಸಂ
ಕುಲದೊಳ್ ನೀನೆ ವಿಳಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ ಪಣ್ತ ಪ।
ಣ್ಣಳಿನೋವೋ ಪೆಟತೇನೋ ನೀನೆ ಭುವನೈಕಾರಾಧ್ಯನೈ ಭೃಂಗ ಕೋ
ಕಿಲ ಕೀರ ಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ॥[4]

ಬಹುಕಾಲದಿಂದಲೂ ಮಾವಿನಮರವನ್ನು ಕಂಡು ಒಲಿದ ಕವಿಯ ಹೃದಯಾನುಭೂತಿ ಸುಂದರ ಪ್ರಶಂಸೆಯೊಂದರಲ್ಲಿ ತನ್ನ ಬಿಡುಗಡೆ ಪಡೆದಿದೆ. ಕವಿ ಮಾವಿನ ಮರದ ಕೆಂದಳಿರುಗಳ ಕೋಮಲತೆಯನ್ನು ಹೂವುಗಳ ಬೆಡಗನ್ನು ಮಾವಿನ ಕಾಯಿಗಳ ಸೊಗಸನ್ನೂ, ಹಣ್ಣಿನ ಸವಿಯನ್ನೂ ವರ್ಣಿಸುತ್ತಾ ಅದನ್ನು ಭುವನೈಕಾರಾಧ್ಯ ಎಂದು ಕರೆದು ಗೌರವಿಸುತ್ತಾನೆ. ಕೊನೆಗೆ, "ಭೃಂಗ, ಕೋಕಿಲ, ಕ್ಷೀರ ಪ್ರಿಯ ಚೂತರಾಜಿ ತರುಗಳ್ ನಿನ್ನಂತೆ ಚೆನ್ನಂಗಳೇ" ಎಂದು ಸಂತೋಷ ಭಾವದಿಂದ ಬಣ್ಣಿಸಿದ್ದಾನೆ.

ಲಾಕ್ಷಣಿಕರ ಪ್ರಕಾರ ಅಷ್ಟಾದಶ ವರ್ಣನೆಯಲ್ಲಿ ಮೊದಲನೆಯ ಸ್ಥಾನ ಕಡಲ ವರ್ಣನೆಗೆ. ಈ ವರ್ಣನೆಗೆ ಒಂದು ನಿಯಮವಿತ್ತು. ಅದೆಂದರೆ 'ಜಲದಿಯೊಳ್ ತಿಮಿತಿಮಿಂಗಳೆಗಳ ಮಕರ ಪ್ರಕರ ಶಂಖ ಸಂಭವಮಕ್ಕೆ'[5] ಎಂಬುದನ್ನು ಅನುಸರಿಸಬೇಕಿತ್ತು. ಈ ನಿಯಮವನ್ನು ಎಲ್ಲಾ ಕವಿಗಳು ಒಪ್ಪಿ ಅದೇ ರೀತಿ ಅನುಸರಿಸುತ್ತಾ ಬಂದಿದ್ದಾರೆ.

ಹಾಗೆಯೇ ದುರ್ಗಸಿಂಹ, ಹರಿಹರ, ಲಕ್ಷ್ಮೀಶ, ಪದ್ಮಣಾಂಕ ಇವರೂ ಸಹ ಲಾಕ್ಷಣಿಕರ ನಿಯಮವನ್ನು ಒಪ್ಪುತ್ತಲೇ ಸ್ವಲ್ಪ ಸ್ವತಂತ್ರವನ್ನು ವಹಿಸಿದ್ದಾರೆ. ಅಂದಿನ ಕವಿಗಳಲ್ಲಿ ಕಡಲಿನ ವರ್ಣನೆಯನ್ನು ಆಕರ್ಷಕವಾಗಿ ಸೆರೆ ಹಿಡಿದವನೆಂದರೆ ರತ್ನಾಕರವರ್ಣಿಯೊಬ್ಬನೇ, ಅವನು ತಾನು ನೋಡಿ ಆನಂದಿಸಿದ ಸಮುದ್ರದ ಸೊಬಗನ್ನು ತನ್ನದೇ ಆದ ಶೈಲಿಯಲ್ಲಿ ಚಿತ್ರಿಸಿದ್ದಾನೆ.

ಕಡಲ ತಡಿಯ ಕರುಮಾಡದಿಂದ ಭರತ ಚಕ್ರವರ್ತಿಯ ಅರಮನೆಯ ರಾಣಿಯರು ಸನಿಹದ ಕಡಲನ್ನು ಕಂಡಿದ್ದು ಹೀಗೆ:

**"ಅಟ್ಟುವ ತೆರೆಯ ಮುಂದೋಡುವ ತೆರೆಯಾ ಪೆರ್ಚಿಟ್ಟದಂತೇಳ್ವ ತೆರೆಗಳಾ**
**ತೊಟ್ಟನೆ ಬಯಲಹ ತೆರೆಗಳನವರು ಕಣ್ಣಿಟ್ಟು ನೋಡಿದರರ್ತಿವಡುತ**
**ಎಡೆ ಗತ್ತಿಗಳನಲ್ಲಿಗಲ್ಲಿ ನಿಂದದ್ರಿಯ ನಿಡಗಲ್ಲುಗಳನದರೊಳಗೆ**
**ಎಡೆಯಾಡುತಿಹ ದೋಣಿ ದುಗ್ಗಿ ಕಪ್ಪಲು ದೊಡ್ಡ ಹಡಗುಗಳಿರುವ ನೋಡಿದರು"**[೬]

**ವಸಂತ ಋತು ವರ್ಣನೆ:** ಕನ್ನಡ ಎಲ್ಲಾ ಕವಿಗಳೂ ಋತುವರ್ಣನೆ ತುಂಬಾ ಕುತೂಹಲದಿಂದ ಸ್ಪಂದಿಸಿ ಬಹಳ ಉತ್ಸಾಹದಿಂದ ವರ್ಣಿಸಿರುವುದು ವಿಸ್ಮಯಕಾರಿಯಾಗಿದೆ. ವಸಂತಕಾಲ ಕವಿಗೆ ಪ್ರಿಯವಾದ ಕಾಲ, ಆಗ ಪ್ರಕೃತಿಯಲ್ಲಿ ತುಂಬ ಮರಗಿಡವೆಲ್ಲಾ ಹೂಬಿಟ್ಟಿದ್ದು, ಹಕ್ಕಿಗಳ ಚಿಲಿಪಿಲಿ ಸದ್ದು, ಕೋಗಿಲೆಗಾನ ಗಿಳಿವಿಂಡು ಮುಂಜಾನೆಯ ಕಿರಣ ಇವೆಲ್ಲಾ ಕವಿ ಜನರನ್ನೂ ತನ್ನಡೆಗೆ ಸೆಳೆದಿದೆ.

ಕವಿ ಪಂಪ ವಸಂತಕಾಲದ ರಮ್ಯತೆಯನ್ನು ವರ್ಣಿಸಿರುವ ಬಗ್ಗೆ ನೂತನವಾಗಿದೆ.

**"ಎಳವಿಸಿಲೀಗಲೀಗಳೆ ಮುದಿರ್ದುದು ಚೂತ ಕುಜಾತಮೀಗಳೀ**
**ಗಳೀ ನೆನೆದೋಱು ತಿಂದೊಳದಿನುಣ್ಮಿದ ಷಟ್ಪದ ವೃಂದಮೀಗಳೀ**
**ಗಳೆ ಮೊರೆದತ್ತು ಚಂದನದ ತಳ್ಪಬಲಾ ನಿಕರಕ್ಕದೀಗಳೀ**
**ಗಳೆ ನೆಗಟ್ದಿತ್ತಲೇ ಪುಗಿಲದಾಗಲೆಬೇಡ ವಸಂತರಾಜನಾ॥**

**(ಆದಿಪುರಾಣ)**

ಪಂಪ ವಸಂತ ಮಾಸದ ಅವ್ಯಕ್ತ ಸೌಂದರ್ಯದ ಅತೀ ಸೂಕ್ಷ್ಮತೆಯನ್ನು ತೋರಿಸಿದ್ದಾನೆ. ಎಳಬಿಸಿಲು ಈಗಷ್ಟೇ ಪ್ರಜ್ವಲಿಸುತ್ತಿದೆ. ಮಾವಿನ ಮರಗಳು ಹೂವು ಬಿಡಲಾರಂಭಿಸಿದೆ. ಈಗತಾನೆ ದುಂಬಿಗಳ ಝೇಂಕಾರ ಮೊರೆಯುತ್ತದೆ. ಈಗಲೀಗ ಅಬಲೆಯರ ನಿಖರ ಚಂದನ ತಳಿರುಗಳ ತಳ್ಕೆಯನ್ನು ಆಶಿಸುತ್ತಿದೆ. ಆದ್ದರಿಂದ ವಸಂತಾಗಮನವು ಆಗಲೇಬೇಕು ಎಂದು ಪಂಪ ತನ್ನ ಕಾವ್ಯದಲ್ಲಿ ವರ್ಣಿಸಿರುವ ಬಗೆ ಮೋಹವಾದುದು.

**ಗ್ರೀಷ್ಮಋತು ವರ್ಣನೆ:** ವಸಂತಋತುವಿನ ನಂತರದ ಋತುವಾಗಿದ್ದು ಸುಂದರ ಮನೋಹರವಾದ ವಸಂತಕಾಲದ ಮೇಲೆ ದಾಳಿ ಮಾಡಿ ಪ್ರಕೃತಿಯನ್ನು ಬಿಸಿಲಿನ

ಬೇಗೆಯಿಂದ ಕಂಗೆಡೆಸಿ ಎಲ್ಲೆಲ್ಲೂ ಧೂಳು, ಸೆಕೆ, ದಣಿವು, ಬಾಯಾರಿಕೆ, ಬಂಜೆ ಮೋಡಗಳು, ದರಿಬಿಟ್ಟ ನೆಲ, ಬಿಸಿಲಿನ ಬೇಗೆಯಿಂದ ತತ್ತರಿಸಿ ನಿಸರ್ಗವು ಕಾಂತಿಹೀನವಾಗಿ ಪ್ರಾಣಿಪಕ್ಷಿಗಳು ಲವಲವಿಕೆ ಕ್ಷೀಣಿಸುತ್ತಿದೆ. ಹಾಗೂ ಮನುಷ್ಯನ ಮೇಲೆ ಆಘಾತವಾದ ಪರಿಣಾಮವನ್ನು ಬೀರುವ ಋತುವಾಗಿದ್ದು ಇದನ್ನು ಪ್ರಾಚೀನ ಕವಿಗಳು ಹೃದಯ ಸ್ಪರ್ಶಿಯಾಗಿ ವರ್ಣಿಸಿದ್ದಾರೆ.

ಹರಿಹರ ಗ್ರೀಷ್ಮಋತುವಿನ ಬೇಗೆಯನ್ನು ವಿವಿಧ ರೂಪದಲ್ಲಿ ಅದ್ಭುತವಾಗಿ ವರ್ಣಿಸಿದ್ದಾನೆ.

**"ಮರದಡಿಯೊಳ್ ಕಾನನದೊಳ್ ಗಿರಿತಟದೊಳ್**
**ಬಟ್ಟಬಯಲೊಳ್ ಅಂಬರ ತಳದೊಳ್**
**ಕರಿಯ ಬಿಸಿರ್, ಉರಿಯ ಬಿಸಿಲ್**
**ಅಚ್ಚರಿಯ ಬಿಸಿಲ್ ಪಿರಿಯ ಬಿಸಿಲ್**
**ಅಖಂಡಿತದ ಬಿಸಿಲ್"**

**(ಗಿರಿಜಾ ಕಲ್ಯಾಣ, ಪು-೯)**

ಮರದಡಿಯ ನೆರಳೂ ಸಹ ಕರಿಯ ಬಿಸಿಲಾಗಿದೆ ಎನ್ನುವ ಕವಿ ಕಲ್ಪನೆ ಅದ್ಭುತ ಬಿಸಿಲ ಬೇಗೆಯ ತೀವ್ರತೆಯನ್ನು ತಿಳಿಯಲು ಈ ಸಾಲುಗಳೇ ಸಾಕು.

**ವರ್ಷಋತು:** ಇದು ಮುಂಗಾರು ಮಳೆಯ ಕಾಲವಾಗಿದ್ದು ಕವಿಗಳಿಗೆ ಅತ್ಯಂತ ಪ್ರೀತಿ ಪಾತ್ರವಾದ ಋತುವಿಗೆ ಮಳೆಯ ಭಾವ ಭಂಗಿ, ರುದ್ರ ರಮಣೀಯತೆಯನ್ನು ಕವಿಗಳು ಬಹಳ ಅಂದವಾಗಿ ವರ್ಣಿಸಿದ್ದಾರೆ.

ವರ್ಷಋತುವನ್ನು ಸವಿಸ್ತಾರವಾಗಿ ವರ್ಣಿಸುವವರಲ್ಲಿ ಮೊದಲಿಗ ಷಡಕ್ಷರಿ ಕವಿ. ಇವನ ವರ್ಣನೆಯೇ ಉಳಿದ ಕವಿಗಳಿಗೂ ಉತ್ತಮ ಮಾದರಿಯಾದಂತೆ ತೋರುತ್ತದೆ. ಆತ್ಮಸ್ಪರ್ಶಿಯಾದ ಒಂದು ಪದ್ಯದಲ್ಲಿ ಮಳೆಯ ವರ್ಣನೆಯನ್ನು ಹೀಗೆ ಹಿಡಿದಿಟ್ಟಿದ್ದಾನೆ.

**"ಘಡು ಘಡು ಚಿಟಿಲೆಂದು**
**ಗ್ಗಡದ ಸಿಡಿಲ್ದನಿಯೆ ಪೊಡೆಯೆ ಗಗನ ಸ್ಥಲದಿಂ**
**ದುಡುಗಳ್ ಪಟಪಟನುದಿರ್ವ ವೊ**
**ಲೆಡೆವಿಡಮಿ ವಾಲಿವರಲ ಮಱೆಬಗೆಗೊಳಿಕುಂ"**

**(ಷಡಕ್ಷರಿ)**

ನಂತರ ಲಾಕ್ಷಣಿಕರ ಸಂಪ್ರದಾಯಕ್ಕೆ ಅನುಗುಣವಾಗಿ ಜಾತಕ ಪಕ್ಷಿಗಳ ಉಲ್ಲಾಸವನ್ನು ನವಿಲಿನ ನಾಟ್ಯವನ್ನು ಒಂದೆರಡು ಪದ್ಯದಲ್ಲಿ ವರ್ಣಿಸಿ, ಅನಂತರ

"ಜಳಮಯಮಿಳೆ ಜಳದ ಮಯಂ
ಜಳಧರ್ ಮಾರ್ಗಂ ತಟಿನ್ಮಯಂ ದಿಗ್ವಳಯಂ
ಕಳಿಗೊಳ್ ನಮವಸೃಷ್ಟಿಯನೇಂ
ತಳೆದುದೊ ಭವನಂ ಘನಾಗಮಾವಂಭುಜೆ ಭವನಿ॥

ಧರೆಯೆಲ್ಲಾ ಜಳಮಯವಾಗಿ ಕಾಂತಿಹೀನವಾಗಿದೆ ಎಂದು ವರ್ಣಿಸಿದ್ದಾನೆ.

**ಶರದೃತು ವರ್ಣನೆ:** ಮಳೆಗಾಲ ಮರೆಯಾಗುತ್ತಿದ್ದಂತೆಯೇ ಶರದೃತು ಪ್ರವೇಶದ ಸೊಬಗನ್ನು 'ಕುಮಾರವ್ಯಾಸ' ಮೂರು ಮಾತಿನಲ್ಲಿ ಸುಂದರವಾಗಿ ಚಿತ್ರಿಸಿದ್ದಾನೆ.

"ಜಾರಿದುದು ಮಳೆಗಾಲ ಅಲೆ ಬಿಳುಪೇರಿದುವು ಮುಗಿಳುಗಳು
ಕತ್ತಲೆ ಸೂರೆ ಹೋದುದು ಹಗಲಿರುಳು ರವಿ ಶಶಿಗಳುಪಟಳಕೆ"

ಆಕಾಶ ಶುಭ್ರವಾಗಿ ಕಾರ್ಮೋಡಗಳು ಚದುರಿ ಹೋಗಿ, ಗುಡುಗು ಮಿಂಚುಗಳ ಆರ್ಭಟವೂ, ಕಾಂತಿಯಾ ಭೀತಿಯನ್ನುಂಟು ವರ್ಷಾಧಾರೆಯಿಂದ ಕೆಂಪಾದ ನದಿಗಳು ತಿಳಿಯಾಗಿ ಹರಿಯುತ್ತಿವೆ ಎಂದರೆ ವರ್ಷಕಾಲ ಮರೆಯಾಗಿ ಸ್ವಲ್ಪ ಸ್ವಲ್ಪವೇ ಶರದೃತು ತನ್ನ ಅಡಿ ಇಡುವಿಕೆಯನ್ನು ಸಾಬೀತುಪಡಿಸುತ್ತದೆ. ಇದೇ ಕಾಲದಲ್ಲಲ್ಲವೇ ರಾಜರು ದಿಗ್ವಿಜಯವನ್ನು ಪ್ರಾರಂಭಿಸುವುದು ಇವರ ಜೊತೆಯೇ ಕವಿಗಳೂ ಸೇರಿ ತಮ್ಮ ವರ್ಣನಾ ದಿಗ್ವಿಜಯವನ್ನು ಪ್ರಾರಂಭಿಸುತ್ತಾರೆ.

"ತೊಲಗದ ಮೋಡಮೋಡಿದುದು ತಂದಲಗುಂದಲೆಯಾಯ್ತು ಮೇಘಮಂ
ಡಳವಳಚಿತ್ತು ಮಿಂಚುವೆಳಗಂ ಚಿರಮಾಯ್ತು ಶಿಖಂಡಿ ತಾಂಡವ
ಕ್ಕಲಸಿದುದೆಯ್ದು ಕುಂದಲತೆ ಕುಂದಲೊಡರ್ಚಿದುದಂಚೆ ಚಂಚುವಿಂ
ನಲಿದು ಮೃಗಾಳಮಂ ಸವಿದುದಾಯ್ತು ಶರತ್ಪ್ರವೇಶದೊಳ್
ಚಾದಗೆಯ ಸೊಕು ತೀರ್ದುದು
ಕೇದಗೆಯತ್ತೆಯೆತ್ತಿ ಪೋಯ್ತು ಗಿರಿಮಲ್ಲಿಗೆಯಾ
ಮೋದಂ ಕಟಿದುದು ದರ್ಬಿಸಿ
ಪೋದುದು ಮಣ್ಣನಿ ನವಿಲ್ಗೆ ಶರದಾಗಮದೊಳ್"

(ಸೂಕ್ತಿ ಸುಧಾರ್ಣವಂ– ಪು. ೨೭೯)

**ಹೇಮಂತ ಮತ್ತು ಶಿಶಿರ:** ಇವೆರಡೂ ಋತುಗಳು ಬೇರೆ ಬೇರೆಯಾಗಿದ್ದರೂ ಸಹ ಇವೆರಡರ ಸ್ವಭಾವಗಳು ಒಂದೇ ಆಗಿವೆ. ಆದ್ದರಿಂದ ಕನ್ನಡ ಕವಿಗಳು ಇವೆರಡನ್ನೂ ಒಂದಾಗಿಯೇ ಕಂಡು ಈ ಮಂಜಿನ ಲೋಕವನ್ನು 'ಮಾಗಿ' ಎಂದು ಕರೆದು ಉತ್ಸುಕತೆಯಿಂದ ವರ್ಣಿಸಿದ್ದಾರೆ. ಮಾಗಿಯ ಕಾಲದ ಮಂಜಿನ ಲೋಕವನ್ನಾಗಲೀ ಚಳಿಗಾಲದಲ್ಲಿನ ಪ್ರಕೃತಿಯ ವಿಶಿಷ್ಟ

ಬದಲಾವಣೆಯನ್ನಾಗಲೀ ಅದರ ಧಾರಾಣತೆಯನ್ನಾಗಲೀ ನಮ್ಮ ಕವಿಗಳು ವರ್ಣಿಸಲು ಹೋಗಿಲ್ಲ. ಮಾನವನಿಗೆ ಚಳಿಯಿಂದಾಗಿ ನೀರೂ, ನೆರಳೂ ಬೇಡವಾಗಿ ನಡುಗುವುದೊಂದೇ ಆಯಿತು ಎಂಬಂತೆ ವರ್ಣಿಸಿದ್ದಾರೆ.

ಅಜ್ಞಾತ ಕವಿಯೊಬ್ಬ ಮಾಗಿಯ ಮಂಜನ್ನು ವಿಶಿಷ್ಟವಾಗಿ ವರ್ಣಿಸಿದ್ದಾನೆ.

**"ಗಗನಂ ದಿಗ್ವಳಯಂ, ದಿನೇಶವಳಯಂ ಶೈಲಾಳಿ ತೋಯಾಶಯಂ**
**ನಗರಂ, ನಂದನಮ್, ಎಂಬ ವಸ್ತುಗಳಿಗೆ ಆರುಂ ಕಾಣದಂ**
**ತಾಗಿ ತೊಟ್ಟಗೆ ಕಣ್ ವಂಚಿಸಿ ಸುಂಗಿತೋರ್ಪ ಚಪಲಂ ಹೇಮಂತನೆಂಬ**
**ಇಂದ್ರಜಾಲಿಗನಿರ್ದು ಊದಿದ ಧೂಮದಂತೆ ಅಸದಳಂ ಪೆರ್ಬಿತ್ತು ಮಂಜೆತ್ತಲುಂ"**
**(ಸೂಕ್ತ ಸುಧಾರ್ಣವಂ, ಪು. ೨೭೭)**

ಹೇಮಂತನೆಂಬ ಮಂತ್ರವಾದಿಯ ಮಾಟದಿಂದ ಆಕಾಶ ದಿಕ್ಕು, ಸೂರ್ಯನ ಕಿರಣ ಬೆಟ್ಟ, ನದಿ, ಕೆರೆ, ನಗರ ನಂದನ ಇವುಗಳ ಕಾಣದಾಗಿವೆ. ಯಾರೂ ನೋಡದ ಹಾಗೆ ಆತ ಇಂದ್ರಜಾಲಿಕ ಮಂತ್ರಧೂಮವನ್ನು ಊದಿದ್ದಾನೆ ಎಂದು ಋತುವನ್ನು ಚಿತ್ರಿಸಿದ್ದಾನೆ.

**ಸೂರ್ಯ-ಚಂದ್ರ ವರ್ಣನೆ:** ದಿನಕರನ ಉದಯದ ಸೌಂದರ್ಯ ಲಹರಿಯನ್ನು ವೇದೋಪನಿಷತ್ ಋಷಿಗಳಿಂದ ಹಿಡಿದು ಜನಪದ ಕವಿಗಳವರೆಗೂ ಸುಂದರವಾಗಿ ವರ್ಣನೆ ಮಾಡುತ್ತಾ ಬಂದಿದ್ದಾರೆ. ಪ್ರಾಚೀನ ಕವಿಗಳಲ್ಲಿ ಬಹಳ ಸಂಪ್ರದಾಯ ಬದ್ಧವಾಗಿದ್ದು ನಿರಸ ನಿರಾಸೆಯನ್ನುಂಟು ಮಾಡುತ್ತದೆ. ಸೂರ್ಯೋದಯದ ದೃಶ್ಯವೊಂದು ನಿರಂತರ ಚೆಲುವಿನ ಚೆಲುವೆಗಾಗಿ ತೊರೆದ ಕೇವಲ ಕಾಲಸೂಚಕವಾಗಿ ಸೂರ್ಯೋದಯದಿಂದ ಆದ ಪರಿಣಾಮ-ವನ್ನು ಕವಿ ಸಮಯ ಸಂಕೇತಗಳಿಂದ ಕಮಲ ಅರಳಿತು, ನೈದಿಲೆ ಕಣ್ಣುಮುಟ್ಟಿತು. ಚಕೋರ ಕೊರಗಿತು, ನಕ್ಷತ್ರಗಳು ಮುಸುಳಿದವು ಇತ್ಯಾದಿಯಾಗಿ ಬಣ್ಣಿಸುವುದು ಅವರ ಪದ್ಧತಿಯಾಗಿತ್ತು.

ನೇಸರನು ಉದಯಿಸಿದನೆಂದರೆ ಪ್ರಾಣಿ ಪ್ರಪಂಚವೆಲ್ಲ ಹೇಗೆ ಎಚ್ಚರಗೊಳ್ಳುತ್ತವೆ. ಹುಲ್ಲಿನ ಮೆಲೆ ಬಿದ್ದ ನೀರಿನ ಹನಿಗಳು ಅಲ್ಲಿಯೇ ಹೇಗೆ ಕರಗಿ ಹೋಗುತ್ತವೆ, ನವಿಲು, ಆನೆ, ಸಿಂಹಗಳಿಗೆ ಹೇಗೆ ಬೆಳಗಾಗುತ್ತದೆ. ಕಮಲ ಮತ್ತು ಕೋಕದ್ವಯಗಳಿಗೆ ಉಡುಗೊರೆಯನ್ನು ಕೊಡುವ ರೀತಿ ಅರುಣನ ಉದಯವಾಗುತ್ತದೆ. ಜೊತೆಗೆ ಸೂರ್ಯನ ಈ ವರ್ಣನೆಯನ್ನು ಚೆನ್ನಾಗಿ ತಿಳಿದು ಅವುಗಳಲ್ಲಿರುವ ಸ್ವಾದವನ್ನು ಆಸ್ವಾದಿಸಬೇಕು.

ಹಾಗೇ ನೋಡಿದರೆ ರತ್ನಾಕರವರ್ಣಿಯ ಸೂರ್ಯೋದಯದ ವರ್ಣನೆ ಬಹಳ ಚೆಲುವಾದುದು:

**ತಂಗಾಳಿ ತೀಡಿತು ತಾರೆಗೆ ಮುಸುಳ್ದುವು**
**ಹಿಂಗಿತು ಜಗದಂಧಕಾರ**

**ಮುಂಗಾರ ಮೊಳಗಿನಂದದಿ ಮೊಳಗಿದವು ವಾ**
**ದ್ಯಂಗಳು ಜಿನಗೃಹದೊಳಗೆ**
**ಎಳವಸಿಲಡರ್ದೇಂ ಜಿನನಿಲದ ರತ್ನ**
**ಕಳಶದೊಳ್ಮಾತಾಡೆ ಕಂಡು**
**ಬೆಳಗಾಯ್ತು ದೇವ ಕಣ್ತೆರೆ ಎಂದು ವನಿತೆಯ**
**ರೆಳಿಸಿ ಬಿನ್ನವಿಸಿದರಾಗ್**

**(ಭರತೇಶ ವೈಭವ, ಪರ್ವಯೋಗ ಸಂಧಿ ೭-೮)**

ಇಲ್ಲಿ ಸುಪ್ರಭಾತಕಾಲದ ಸೌಂದರ್ಯಾನುಭವದ ಸೊಬಗು ಕಣ್ಮುಂದೆ ಬರುತ್ತದೆ. ಅದರಲ್ಲೂ ಎಳೆಯ ಬಿಸಿಲ ಅಡರ್ದು ಏರಿ ಜಿನ ನಿಲಯದ ರತ್ನ ಕಳಶದೊಡನೆ ಮಾತಾಡಿತು ಎನ್ನುವ ಕವಿಯ ಕಲ್ಪನೆ ಅದ್ಭುತವಾದುದು. ಪ್ರಸ್ತುತದಲ್ಲಿ ಸೂರ್ಯೋದಯದ ವರ್ಣನೆ ಪ್ರತಿಯೊಂದು ಕಾವ್ಯದಲ್ಲಿ ಇದ್ದರೂ ಒಬ್ಬಿಬ್ಬರು ಕವಿಗಳನ್ನು ಹೊರತುಪಡಿಸಿ ಉಳಿದವರು ಸೂರ್ಯೋದಯದ ಚೆಲುವನ್ನು ವೀಕ್ಷಿಸಿ ರಸಾನುಭವ ಪಡೆದಿಲ್ಲ; ಒಂದು ವೇಳೆ ಪಡೆದಿದ್ದರೂ ಅದನ್ನು ಸರಿಯಾಗಿ ತಿಳಿಸಿಲ್ಲ ಎನ್ನುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಚಂದ್ರ ಸೌಂದರ್ಯದ ಸಂಕೇತ ಚಂದ್ರೋದಯದಂತಹ ಸುಂದರವಾದ ರೋಮಾಂಚನಕಾರಿಯಾದ ಘಟನೆ ಮತ್ತೊಂದಿಲ್ಲ. ಆದರೆ ಕವಿಯ ಕಾವ್ಯಲೋಕದಲ್ಲಿ 'ಶೃಂಗಾರಮೆ ರಸಂ' ಎನ್ನುವ ಅರ್ಥದಲ್ಲಿ ಈ ಬೆಳದಿಂಗಳು ಕಡಿವಾಣವನ್ನು ಕಿತ್ತೆಸೆದ ತುಂಟ ಕುದುರೆಯಂತೆ ಸೂಳೆಗೇರಿಯಲ್ಲಿ ಅಲೆಯುತ್ತದೆ. ಹಾಗೆಯೇ ಹರಿಹರನ ಗಿರಿಜಾಕಲ್ಯಾಣದಲ್ಲಿ ಗಿರಿರಾಜನೊಂದಿಗೆ ನಾರದನನ್ನೂ ಸೂಳೆಗೇರಿಯ ಬೀದಿ ಬೀದಿಯಲ್ಲಿ ಅಲೆಸಿ ಅದು ಪೂರ್ವ ಜನ್ಮದ ಕರ್ಮದ ಫಲ ಎಂದು ಚಿತ್ರಿಸಿದ್ದಾನೆ.

ಆದರೆ ಚಂದ್ರೋದಯ ಸೌಂದರ್ಯವನ್ನು ಬೆಳದಿಂಗಳ ಶಾಂತ ಭವ್ಯತೆಯನ್ನು ಹಲವಾರು ಕವಿಗಳು ಬಣ್ಣಿಸಿದ್ದಾರೆ. ನಿಜವಾದ ಸೌಂದರ್ಯವನ್ನು ನಾವು ಕಾಣಬೇಕಾದರೆ ಪಂಪನಲ್ಲಿಗೆ ಹೋಗಬೇಕು. ಪಂಪನ ಕಣ್ಣಿಗೆ ಚಂದ್ರ ಸಿಂಹದಂತೆ ಕಾಣುತ್ತದೆ.

**"ಬಳೆದ ತಮೋ ಮದೇಭಘಟೆಯೊಡ್ಡೊಡೆವನ್ನೆಗಂ**
**ಉನ್ನತ ಉದಯೊಚಳಗುಹೆಯಿಂ ಲಸತ್ಕಿರಣ ಕೇಸರಮಂ ಪುರಪುತುಂ**
**ಆಗಳ್ ಅಗುಳಿಸುವ ಬಾಯಕೆಂಪನ್ ಉದಯಂಗೆಯ ಪೊಣ್ಮುವ ಕೆಂಪು ಪೋಲ್ವಿನಂ**
**ತಳರೆ ಬೆಡಂಗಿನೊಳ್ ಪುದಿದುದು ಎಜ್ಜಿರ,ಮ್ ಉದ್ಗತ ಚಂದ್ರ ಸಿಂಹದಾ"**

**(ಆದಿಪುರಾಣ -೧೨-೩೦)**

ಇದೊಂದು ಅಪೂರ್ವ ಕಲ್ಪನಾಮಯ ಸೌಂದರ್ಯ, ಸುಮಧುರವಾದ ಚಂದ್ರೋದಯವೂ, ತಮೋಮದೇಭಗಳ ಕುಂಭಸ್ಥಳವನ್ನೂ ಒಡೆಯುತ್ತಾ ಕಿರಣ ಕೇಸರವನ್ನು ಕೆದರುತ್ತಾ ಕೆಂಪಾದ

ಬಾಯಿಂದ ಆಗುಳಿಸುತ್ತಾ ಉನ್ನತ ಉದಯಾಚಲ ಶಿಖರದಿಂದ ಬರುವ ಸಿಂಹದಂತೆ ಅಗುರ್ವಾಗಿ ತೋರುತ್ತದೆ. ಆಗತಾನೇ ಮೂಡಿದ ಚಂದ್ರನ ಆ ರಕ್ತವಾದ ಬಿಂಬವನ್ನು ಕಂಡ ಕವಿಯ ಕಣ್ಣು ಇಲ್ಲಿ ಕಲ್ಪನಾಮಯವಾಗಿ ಚಿತ್ರಿಸಿದ್ದಾನೆ. ಒಟ್ಟಿನಲ್ಲಿ ಸೌಂದರ್ಯದ ಗಣಿಯಾದ ಚಂದ್ರನಿಗೆ ತಕ್ಕ ವರ್ಣನೆ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಂಡುಬರುವುದು ಸ್ವಲ್ಪ ಮಾತ್ರ. ಪಂಪನದೇ ಆದ ಈ ಪದ್ಯವನ್ನು ನೋಡಿದಾಗ.

**ಅದೊಂದಿನಿಸು ಬೇಗದಿಂ ನವಜಪಾ ಪ್ರಸೊನಾಭವಮಾಯ್ತು**
**ಅದೊಂದಿನಿಸು ಬೇಗದಿಂ ಕನಕ ಕುಂಭದಂತಾಯ್ತು**
**ಮತ್ತದೊಂದಿನಿಸು ಬೇಗದಿಂ ಮೃದುಮೃಣಾಳ ಸಂಕಾಶಮಾಯ್ತು**
**ಅದೇಂ ಬಟಿಕ ಬಿಂಬದುಜ್ವಳಿಕೆಯೋ ಸುಧಾಸೂತಿಯಾ**

**(ಆದಿಪುರಾಣ, ೧೨-೪೭)**

**ಪರ್ವತ ವರ್ಣನೆ**

'ಸೂಕ್ತಿಸುಧಾರ್ಣವ'ದ ಮಲ್ಲಿಕಾರ್ಜುನನು ಪರ್ವತ ವರ್ಣನೆಯನ್ನು ಮಾಡುವವರಿಗೆ ಒಂದು ಸೂತ್ರವನ್ನು ಹೇಳಿದ್ದಾನೆ.

**ತರುತತಿ ಬಳ್ಳಿ ಪುಟು ಪಕ್ಕಿ ಮೃಗಂ ಫಣಿ ಜೇರ್ ಮೃಗವ್ಯಮೊ**
**ಜ್ವರಮೆಸೆಪುನ್ನತಿಕ್ಕ ಸಿಲೆ ಕೋಡು ಗುಹಾವಳಿ ತಾಪಸಾಶ್ರಮಂ।**
**ದರಿ ಸರಿವಾನೆಗಳ ಗಜಿಕೆಮೇವ ಮುಗಿಲ್ ದೋಣಿ ಬಿಲ್ಲ ಪಳ್ಳಿಕೆ**
**ನ್ನರ ಮಿಥುನಾಳಿಗಳ್ ವಿಷಯಮಾಗಿರೆ ತೀರ್ಪುದು ಶೈಲವರ್ಣನಂ॥**

ಈ ಪದ್ಯವನ್ನು ಗಮನಿಸಿದರೆ ಇದನ್ನು ಓದಿದ ಪ್ರತಿಯೊಬ್ಬರ ಮನಸ್ಸಿನಲ್ಲಿ ಯಾವ ವಿಶೇಷ ಭಾವನೆಯನ್ನು ಉಂಟುಮಾಡುವುದಿಲ್ಲ. ಇದು ಲಾಕ್ಷಣಿಕರು ನಿರೂಪಿಸಿದ ತತ್ತ್ವದ ಆಧಾರದ ಮೇಲೆ ಹಲವು ನಿರ್ಬಂಧದ ಮೂಲಕ ಪರ್ವತ ವರ್ಣನೆ ಎಂದರೆ ಏನೆಂಬುದನ್ನು ಹೇಳಿದ್ದಾನೆ.

**"ಕುವಲಯ ಪಾಂಡುರಂ ಕನಕಪಂಕಜಷಂಡವಿರಾಜಿ ಕೇಕಿತಾಂ**
**ಡವರಮಣೀಯ ಪುಷ್ಪಲತೆಕಾವನ ಮುನ್ಮದಬೃಂಗಮಾಳಿಕಾ**
**ರವಮುಖರೀಕೃತಾಮ್ರವನ ಶೋಭಿಷಿತ ಮಾಶ್ರಿತದಿವ್ಯ ಸೌಂದರೀ**
**ನಿವಹವಿಕೀರ್ಣ ಚಂಪಕವನಂ ಕರಮೊಪ್ಪುಗುಮಾ ಮಹೀಧರಂ**

**(ಆದಿಪುರಾಣಂ – ಪು.೧೩)**

ಇಲ್ಲಿ ಬಳಸಿರುವ ಪದಗಳು ನಮ್ಮಲ್ಲಿ ಒಂದು ಪರ್ವತದ ಕಲ್ಪನೆಯನ್ನು ಮೂಡಿಸುತ್ತದೆ. ಈ ಪದ್ಯದಲ್ಲಿ ಪರ್ವತದ ಸೌಂದರ್ಯ ನೆಲೆಗೊಂಡಿದೆ. ಆದರೆ ಪಂಪನ ಪರ್ವತ ವರ್ಣನೆ ಅಷ್ಟೊಂದು ಹೃದಯ ಮುಟ್ಟುವುದಿಲ್ಲ. ನಿಜವಾದ ಸೌಂದರ್ಯವನ್ನು ಸವಿಯಲು ಇವರಿಂದ

ಪ್ರೇರಿತಗೊಂಡು ಆಧುನಿಕ ಸಾಹಿತ್ಯದಲ್ಲಿರುವ ಪರ್ವತ ವರ್ಣನೆಯಲ್ಲಿ ನೂತನತೆಯನ್ನುಂಟು ಮಾಡಿದೆ. ಇಂತಹ ವರ್ಣನೆಯಿಂದ ಹೃದಯದಲ್ಲಿ ಏನೋ ಒಂದು ಉಲ್ಲಾಸ ಉಂಟಾಗಲು ಪ್ರೇರೇಪಿಸುತ್ತದೆ.

**ಉದಕವರ್ಣನೆ:**

ಉದಯಾದಿತ್ಯನು ನದಿಗಳು, ಕೆರೆಗಳು, ಸರೋವರಗಳು ಇವೇ ಮೊದಲಾದ ಜಲಾಶಯಗಳನ್ನು ಕುರಿತು ಮಾಡುವ ವರ್ಣನೆಯೇ ಉದಕ ವರ್ಣನೆ ಎಂಬ ಅಭಿಪ್ರಾಯ ಪಟ್ಟಿರುವನು. ಇಂತಹ ವರ್ಣನೆಗಳು ನಮ್ಮ ಕನ್ನಡ ಸಾಹಿತ್ಯದಲ್ಲಿ ಎಲ್ಲೋ ಅಲ್ಲಿ ಇಲ್ಲಿ ಕಂಡುಬರುತ್ತದೆ. ನಮ್ಮ ಕವಿಗಳು ಕಾವೇರಿ, ಕಪಿಲ, ಗೋದಾವರಿ ಮುಂತಾದ ನದಿಗಳ ವರ್ಣನೆ ಮಾಡದೆ ಗಂಗಾ, ಯಮುನಾ, ಬ್ರಹ್ಮಪುತ್ರಾ ಇಂತಹ ನದಿಗಳ ವರ್ಣನೆ ಮಾಡಿದ್ದಾರೆ. ನಮ್ಮ ಸುತ್ತಮುತ್ತಲಿನ ನದಿ, ಸರೋವರಗಳನ್ನು ವರ್ಣನೆ ಮಾಡದೇ ದೂರದಲ್ಲಿರುವ ನದಿಗಳನ್ನು ಕೇವಲ ಕಲ್ಪನೆಯ ಮೂಲಕ ವರ್ಣನೆ ಮಾಡಿದರೆ ಮನಸ್ಸಿಗೆ ಅದು ಮುಟ್ಟುವುದಿಲ್ಲ.

**"ಗಂಗೆಯ ಗೋತ್ರಮೋ ಸೊದೆಯ ಸಾರಮೆ ಬೆಳ್ನಗೆಯೊಂದು ಬಿತ್ತೊಮ**
**ತ್ತಿಂಗಡಲಿರ್ದ ಬೇರೊ ಪೊಸ ಮುತ್ತಿನ ಪುಟ್ಟುವ ನೀರೊ ತೋಪ ಬೆ।**
**ಳ್ದಿಂಗಲ ಬಯ್ಕೆಯೋ ಜಗದ ಧಿವರೆಯರ್ಕಳ ಕಣ್ಣ ಬೆಳ್ಪು ಬೆ**
**ಳ್ಳಂಗಡೆದೆತ್ತೊ ಪೇಟುಮೆನೆ ನಿರ್ಮಲ ಮಾದುದು ನಿರಜಾಕರಂ॥"**

ಇಲ್ಲಿ ಬೆಳ್ಳಗಿರುವ ಕೆಲವು ವಸ್ತುಗಳೊಡನೆ ಶುಭ್ರವಾದ ಸರೋವರದ ನೀರನ್ನು ಹೋಲಿಸಿ ವರ್ಣಿಸಿರುತ್ತಾನೆ. ಆದರೆ "ಬೆಳ್ನಗೆಯೊಂದು ಬಿತ್ತೊ, ಜಗದಧಿದವರೆಯರ್ಕಳ ಕಣ್ಣ ಬೆಳ್ಪು ಬೆಳ್ಳಂಗೆಡೆದತ್ತೊ" ಎಂಬ ಹೋಲಿಕೆಗಳಿಗೆ ಮಾತ್ರ ಯಾವುದೇ ವಸ್ತುವನ್ನು ಬಳಸಿ-ಕೊಳ್ಳದಿದ್ದರೂ ಅವು ಪ್ರತಿಭಾ ಶಕ್ತಿಗೆ ಗೋಚರವಾಗುವಂತಹ ಇನ್ನು ಉಳಿದವು ಊಹಾ ಶಕ್ತಿಗೆ ಸಿಲುಕುವಂತಹವು. ಹಾಗೆಯೇ ಮುಂದುವರೆದು ಚಂದ್ರನು ಸರೋವರವನ್ನು ಸ್ವಲ್ಪ ಶೃಂಗಾರ ರಸದೊಡನೆ ಸರೋವರವನ್ನು ವರ್ಣಿಸಿದನು. ಇದು ಕೇವಲ ಕವಿಯ ಕಲ್ಪನೆಯಾಗಿದ್ದರೂ ವರ್ಣನ ವೈಖರಿಯನ್ನು ಅವನ ಪ್ರತಿಭೆಯನ್ನು ಮೆಚ್ಚಲೇಬೇಕು. ತನ್ನ ಕಲ್ಪನೆಗೂ ಮೀರಿ ಕವಿ ವರ್ಣನೆ ಮಾಡಿದ್ದಾನೆ.

**ವನಸ್ಪತಿಗಳ ವರ್ಣನೆ**

ಪ್ರಕೃತಿಯ ಸೌಂದರ್ಯವನ್ನು ಹೆಚ್ಚಿಸಿರುವ ಸಮುದ್ರ, ಸೂರ್ಯ, ಚಂದ್ರ, ಜಲ, ಋತು, ಸರೋವರ, ನದಿ ಇವುಗಳ ವರ್ಣನೆಯಾದ ಮೇಲೆ ಪ್ರಕೃತಿ ಖಣಿಯಾಗಿರುವ ವನಸ್ಪತಿಗಳ

ವರ್ಣನೆಯನ್ನು ಗಮನಿಸುವುದಾದರೆ, ಪ್ರಕೃತಿಯಲ್ಲಿರುವ ಸ್ವಚ್ಛಂದತೆಯಲ್ಲಿ ವನರಾಶಿ ಕೂಡ ಒಂದು. ಈ ವನರಾಶಿಯಲ್ಲಿ ನೂರಾರು ತರಹದ ಮರಗಳಿವೆ. ಅಲ್ಲಿರುವ ಹಕ್ಕಿಗಳು ನೂರಾರು ತರಹದ ಸ್ವರ ಹೊರಡಿಸುತ್ತವೆ. ಇಂತಹದೇ ಸ್ವರ ಹೊರಡಿಸಬೇಕೆನ್ನುವ ಕಟ್ಟುನಿಟ್ಟು ಅವುಗಳಿಗೂ ಇಲ್ಲ. ಇಂತಹ ಬಂಧನವು ಇರದ ಕಾರಣದಿಂದಲೇ ಇವುಗಳ ಹಾಡು ಉಲ್ಲಾಸದಾಯಕವಾಗಿದೆ. ಬದುಕಿನಲ್ಲಿ ವಿವಿಧ ಸ್ವರಗಳು ಬೇಕು ಆದರೆ ಆ ಸ್ವರಗಳೆಲ್ಲಾ ಮಧುರವಾಗಿರಬೇಕು ಎಂಬುದನ್ನು ಕವಿಯು ಇಲ್ಲಿ ಅನುಭವಿಸಿದ ದರ್ಶನವಾಗಿದೆ.

ಈ ವನಸ್ಪತಿಗಳಲ್ಲಿ ಕನ್ನಡ ಕವಿಗಳು ಸೌಂದರ್ಯವನ್ನು ಕಂಡುಕೊಳ್ಳುವುದಲ್ಲದೆ ಆನಂದವನ್ನೂ ಜ್ಞಾನವನ್ನೂ ಸಂಪಾದಿಸುವುದರ ಜೊತೆಗೆ ಅದನ್ನು ಸಾಮಾನ್ಯರಿಗೂ ದೊರೆಯುವಂತೆ ಅವಕಾಶಮಾಡಿಕೊಟ್ಟಿದ್ದಾರೆ. ಆದರೆ ಅಸಂಖ್ಯಾತವಾಗಿರುವ ವನಸ್ಪತಿ–ಗಳೆಲ್ಲವುಗಳ ವರ್ಣನೆಯನ್ನು ಮಾಡುವುದು ಸಾಧ್ಯವಾಗುವುದಿಲ್ಲ. ಕೇವಲ ಮನುಷ್ಯನ ಪರಮ ಪ್ರೀತಿಗೆ ಪಾತ್ರವಾಗಿರುವಂತಹ ಆತನ ಮನಸ್ಸಿನಲ್ಲಿ ಭಾವೋದ್ರೇಕವನ್ನುಂಟು ಮಾಡುವುದರ ಜೊತೆಗೆ ಸೌಂದರ್ಯದ ವರ್ಣನೆಯನ್ನು ನೋಡಬಹುದು.

ಹಿಂದಿನ ಕವಿಗಳು ಸಂಪ್ರದಾಯದ ಅನುಸಾರ ಮಾವಿನ ಮರವನ್ನು ವರ್ಣಿಸ–ಬೇಕಾದರೆ ಕೋಗಿಲೆಯ ಗಾನವನ್ನು, ಮಕರಂದ ಸವಿಯುತ್ತಿರುವ ದುಂಬಿಗಳನ್ನು ವರ್ಣಿಸಬೇಕಾಗಿದ್ದಿತು. ಈ ನಿಯಮಕ್ಕೆ ಅನುಸಾರವಾಗಿ ಪಂಪನೂ ಕೂಡ ಮಾವಿನ ಮರದ ವ್ಯಕ್ತ ಸೌಂದರ್ಯವನ್ನು ಈ ರೀತಿಯಾಗಿ ವರ್ಣಿಸಿರುವನು.

**ಇತರೆ ವರ್ಣನೆಗಳು:** ಇಲ್ಲಿಯವರೆಗೆ ಉದಯಾದಿತ್ಯನು ನಿರೂಪಿಸಿದ ಪ್ರಕೃತಿ ಸಂಬಂಧಿಯಾದ ವರ್ಣನೆಗಳನ್ನು ಗಮನಿಸಿದ್ದಾಯಿತು. ಹೀಗೆ ಲಾಕ್ಷಣಿಕರು ವರ್ಣಿಸದೇ ಬಿಟ್ಟ ಕೆಲವು ವರ್ಣನೆಗಳು ಅಲ್ಲಲ್ಲಿ ಕಂಡುಬಂದಿದೆ. ಅಂತಹ ವರ್ಣನೆಗಳು ನೋಡುವುದಾದರೆ ಮಾರುತನ ವರ್ಣನೆ, ಈ ಮಾರುತವನ್ನು ನಮ್ಮ ಕವಿಗಳು ಋತುಗಳ ಜೊತೆಯೇ ವರ್ಣಿಸಬೇಕಾಗಿತ್ತು. ಮಾರುತ ವರ್ಣನೆಯನ್ನು ವಿಭಿನ್ನವಾಗಿ ವರ್ಣಿಸಿರುವ ಕವಿಗಳೇ ಹೆಚ್ಚಾಗಿರುವುದರಿಂದ ಇದನ್ನು ಬೇರೆಯಾಗಿಯೇ ಗಮನಿಸುವುದು ಸೂಕ್ತವಾಗಿದೆ.

ಮಾರುತಗಳಲ್ಲಿ ಹೆಚ್ಚಾಗಿ ನಮ್ಮ ಕವಿಗಳ ಗಮನಕ್ಕೆ ಬಂದಿರುವುದು ಮಲಯ ಮಾರುತ ಇದು ಕೋಗಿಲೆ ಮತ್ತು ತಾವರೆಗಳು ಎಷ್ಟು ಆಕರ್ಷಣೆಯನ್ನು ಕವಿಗಳ ಕಡೆಗೆ ಬೀರುವುವೋ ಅಷ್ಟೇ ಗಮನವನ್ನು ಸೆಳೆದಿದೆ. ಬೇಸಿಗೆ ಕಾಲದಲ್ಲಿ ಬಿಸಿಲ ಧಗೆಗೆ ಬಳಲಿ ಆಯಾಸ ಪರಿಯಾರ್ಥಕ್ಕಾಗಿ ಮರದ ನೆರಳಿನಲ್ಲಿ ಕುಳಿತಾಗ ಬಂದು ಆಯಾಸ ಪರಿಹರಿಸುವ, ತಂಪನ್ನಿಯುವ ಗಾಳಿ ಎಲ್ಲಿ ಹೋಯಿತು? ಕವಿ ಏಕೆ ಮಾರುತಗಳ ಬಗ್ಗೆ ವರ್ಣಿಸಿದ್ದಾನೆ.

ಎಂಬ ಪ್ರಶ್ನೆಗಳು ಏನೆ ಇರಲಿ. ಅವರ ವರ್ಣನೆಯನ್ನು ಗಮನಿಸುವುದಾದರೆ ಕೆಲವು ಕವಿಗಳು ಗಾಳಿಯನ್ನು ಆನೆಗೆ ಹೋಲಿಸಿ ವರ್ಣಿಸಿದ್ದಾರೆ. ಎರಡನೆಯ ನಾಗವರ್ಮನು ತನ್ನ "ಕಾವ್ಯವಲೋಕನಂ"ದಲ್ಲಿ ಗಾಳಿಯು ಬೀಸುವಾಗ ಅದರ ಸ್ವಭಾವ ಹೇಗಿರುತ್ತದೆ ಎಂಬುದನ್ನು ನಿರೂಪಿಸಿದ್ದಾರೆ.

**"ಕೆದಱಿತ್ತುಂ ಮಣಲಂ ತೆಮಳ್ದಿ ಕೊಳುತಂ ಭೂರೇಣುವಂ ಸೂಸುತಂ**
**ನದ ನದ್ಯಚ್ಛ ಜಲಂಗಳಂ ಕೆದಱುತುಂ ಭುಜಂಗಳಂ ನುರ್ಗುತಂ**
**ಪೊದಱಂ ಸೀಳುತುಮೆಯ್ದ ವಂಶ ವನಮಂ ಕಾಡಾನೆಯಂ ಪೋಲ್ತು ಪೊ**
**ಕ್ಕುದು ಬೀಡಂ ಲಯಕಾಲ ಕಾಲ ವಿಚಲದ್ಧೀ ಮಾರುತಂ ಮಾರುತಂ"**

ಈ ಮಾರುತದ ವರ್ಣನೆಯಲ್ಲಿ ಸ್ವಲ್ಪ ಜೋರಾಗಿ ಬೀಸುವ ಗಾಳಿಯ ಸ್ವಭಾವವನ್ನು ಕುರಿತು ಹೇಳಿದ್ದಾರೆ. ಗಾಳಿ ಬಿಡುವಾಗ ಸಾಮಾನ್ಯವಾಗಿ ಧೂಳು ಕೆದರುವುದು ಜಲಾಶಯದ ಮೇಲೆ ಬೀಸುವಾಗ ಗಾಳಿ ತೆರೆಗಳನ್ನು ದಡಕ್ಕೆ ಬಡಿಸುವುದು ಬಿದಿರು ಮೆಳೆಗಳನ್ನು ತಾಗಿ ಚೀತ್ಕಾರವನ್ನು ಉಂಟುಮಾಡುವುದು ಇವೆಲ್ಲವು ಸ್ವೇಚ್ಛೆಯಾಗಿ ಸಂಚರಿಸುವ ಆನೆಯ ಕ್ರಿಯೆಯನ್ನು ಹೋಲುತ್ತವೆ.

ಇನ್ನು ಕನ್ನಡ ಸಾಹಿತ್ಯದಲ್ಲಿ ಪ್ರಾಣಿ ಪ್ರಪಂಚದ ವರ್ಣನೆ ಇದೆಯೇ ಎಂಬ ಪ್ರಶ್ನೆಗೆ ಉತ್ತರವಾಗಿ ಅಂತಹ ವರ್ಣನೆ ನಮಗೆ ದೊರಕುವುದಿಲ್ಲ. ನೇಮಿಚಂದ್ರ ಹಸುಕರುಗಳ ವರ್ಣನೆಯನ್ನು ಮಾಡಿದರೆ, ಹಾಗೆಯೇ ಹರಿಹರ ಕಣ್ಣಪ್ಪನ ಒಂದು ಬೇಟೆಯ ಪ್ರಸಂಗವನ್ನು ವರ್ಣಿಸುವ ಸಂದರ್ಭದಲ್ಲಿ ಹುಲಿ, ಕಾಡು ಹಂದಿ ಕಾಡೆಮ್ಮೆ ಇವುಗಳ ವರ್ಣನೆ ಮಾಡಿರುತ್ತಾನೆ. ಹಾಗೆಯೇ ಕಾವ್ಯಾವಲೋಕದಲ್ಲಿ ಉದಾಹರಣೆಗಾಗಿ ನೀಡುವ ಒಂದು ಪದ್ಯದಲ್ಲಿ ಹುಲ್ಲೆಯ ವರ್ಣನೆ ಬರುತ್ತದೆ. ಆದರೆ ಇದು ಯಾವ ಕವಿಯದೆಂದು ಇದುವರೆಗೆ ತಿಳಿದಿಲ್ಲ. ಇನ್ನು ಕೆಲವು ಕಾವ್ಯಗಳನ್ನು ಅಧ್ಯಯನ ಮಾಡಿದರೆ ಇನ್ನು ಹಲವು ವರ್ಣನೆ ದೊರೆಯಬಹುದು.

ಒಟ್ಟಿನಲ್ಲಿ ಈ ಮೂಲಕ ನಮ್ಮ ಕವಿಗಳು ಹೇಗೆ ತಮ್ಮ ಕಾವ್ಯಗಳಲ್ಲಿ ಪ್ರಕೃತಿ ವರ್ಣನೆಯನ್ನು ಮಾಡಿದ್ದಾರೆ ಎಂಬುದನ್ನು ಕೂಲಂಕಷವಾಗಿ ಅಲ್ಲದಿದ್ದರೂ ಪ್ರಸ್ತುತ ಅಧ್ಯಯನಕ್ಕೆ ಎಷ್ಟು ಅವಶ್ಯಕವೋ ಅಷ್ಟನ್ನು ಮಾತ್ರ ಅರಿತಂತಾಗಿದೆ.

### ಕನ್ನಡ ನವೋದಯ ಕಾವ್ಯದ ಪ್ರಭಾವ

ಪ್ರಕೃತಿ ನಿರಂತರ ಪರಿವರ್ತನಾಶೀಲ ಗುಣವುಳ್ಳದ್ದಾಗಿದೆ. ಹಾಗೆಯೇ ಸಾಹಿತ್ಯ ಕ್ಷೇತ್ರದಲ್ಲಿಯೂ ಹೊಸತನ ಎನ್ನುವುದು ನಿರಂತರವಾಗಿದ್ದು ಹೊಸ ಹೊಸ ದಿಗಂತಗಳನ್ನು ಕಣ್ಮುಂದೆ ತರುತ್ತದೆ. ಕನ್ನಡ ಕಾವ್ಯ ಪ್ರಪಂಚವೂ ಸಹ ಈ ಮಾತಿಗೆ ಹೊರತಾಗಿಲ್ಲ. ಅದು

ಕಾಲಕಾಲಕ್ಕೆ ಉಚಿತವಾಗಿ ಮಾರ್ಪಾಡನ್ನು ಹೊಂದುತ್ತಾ ನಿತ್ಯನೂತನವೂ, ಪ್ರಗತಿಗಾಮಿಯೂ ಆಗಿ ಸಾಗಿಬಂದಿದೆ. ಬ್ರಿಟಿಷರ ಆಗಮನದಿಂದ ಭಾರತೀಯ ರಾಜಕೀಯದಲ್ಲಿ ಉಂಟಾದ ಗೊಂದಲ, ಅಸ್ಥಿರತೆ, ಅಸಹಾಯಕತೆಗಳು, ರಾಜಕೀಯ, ಸಾಮಾಜಿಕ ಕ್ಷೇತ್ರದಲ್ಲಿ ಕಾಣಿಸಿ-ಕೊಂಡಂತೆ ಸಾಹಿತ್ಯ ಕ್ಷೇತ್ರದಲ್ಲಿಯೂ ಕಾಣಿಸಿಕೊಂಡಿತ್ತು. ಇಂಥ ಒಂದು ನೀರಸ ಸಂದರ್ಭದಲ್ಲಿ ಕಾಣಿಸಿಕೊಂಡ ನವೋದಯದ ಬೆಳಕು ಕಾವ್ಯದ ಜಡತೆಯ ಕತ್ತಲನ್ನು ಸರಿಸಿ ಕಾವ್ಯದ ಪ್ರಗತಿಗೆ ಕಾರಣವಾಯಿತು.

ಆಧುನಿಕ ಕನ್ನಡ ಕಾವ್ಯದಲ್ಲಿ ನವೋದಯ ಕಾವ್ಯಕ್ಕೆ ತನ್ನದೇ ಆದ ಮಹತ್ವದ ಸ್ಥಾನವಿದೆ. ೧೯೨೦ರ ಸುಮಾರಿನಲ್ಲಿ ಆರಂಭವಾದ ನವೋದಯ ಅಥವಾ ರೊಮ್ಯಾಂಟಿಕ್ ಕಾವ್ಯಯುಗವನ್ನು "ಹೊಸಗನ್ನಡ ಸಾಹಿತ್ಯದ ಸುವರ್ಣಯುಗ" ಎನ್ನಬಹುದು. ಈ ಸುವರ್ಣಯುಗದ ಹೆಜ್ಜೆಗಳು ಸ್ಪಷ್ಟವಾಗಿ ಗೋಚರಿಸಿದ್ದು ಬಿ.ಎಂ.ಶ್ರೀ ಅವರ 'ಇಂಗ್ಲಿಷ್ ಗೀತಗಳು' ಕವನಸಂಕಲನದಲ್ಲಿ. ೧೯೨೦ರಿಂದ ೧೯೫೦ರವರೆಗೆ ಚಾಚಿಕೊಂಡ ಕಾವ್ಯ ನಿರ್ಮಿತಿಗೆ ಕುವೆಂಪು ಅವರು 'ನವೋದಯ ಕಾವ್ಯ' ಎಂದು ಕರೆದಿದ್ದಾರೆ. ಹೀಗೆ ಬಿ.ಎಂ.ಶ್ರೀ ಅವರ ಇಂಗ್ಲಿಷ್ ಗೀತೆಗಳ ಮೂಲಕ ಪ್ರಾರಂಭಗೊಂಡ ನವೋದಯ ಆಂಗ್ಲೋ ರೊಮ್ಯಾಂಟಿಕ್ ಕಾವ್ಯದಿಂದ ಪ್ರೇರಣೆ ಪಡೆದಿದ್ದರೂ ಅದು ಬೆಳೆದದ್ದು ಭಾರತೀಯ ಸಂಸ್ಕೃತಿಯ ಫಲವತ್ತಾದ ಮಣ್ಣಿನಲ್ಲಿ.

ರೊಮ್ಯಾಂಟಿಕ್ ಕವಿಗಳಲ್ಲಿ ಕಂಡುಬಂದ ಬಹುಮುಖ್ಯವಾದ ಸಂಗತಿಗಳು ಎಂದರೆ ಒಂದು ಕಾವ್ಯವಸ್ತುವನ್ನು ಪುರಾಣ-ಇತಿಹಾಸಗಳ ವಲಯದಿಂದ ತಮ್ಮ ದೈನಂದಿನ ಸರಳ ಸಾಧಾರಣ ಸಂಗತಿಗಳ ಕಡೆಗೆ ಸ್ಥಳಾಂತರಿಸಿದ್ದು ಮತ್ತೊಂದು ದೇವರು, ಪೂಜೆ ಇತ್ಯಾದಿ ಭಾವನೆಗಳನ್ನು ದೇವಾಲಯಗಳಿಂದ ನಿಸರ್ಗದ ಕಡೆಗೆ ಸ್ಥಳಾಂತರಿಸಿದ್ದು.[೭]

ರೊಮ್ಯಾಂಟಿಕ್ ಕಾವ್ಯ ಮಾನವ ಮತ್ತು ಪ್ರಕೃತಿ ಸಂಬಂಧದ ಗಾಢತೆಯನ್ನು ವಿಶ್ಲೇಷಿಸುತ್ತದೆ. ಮಾನವನೇ ಅಲ್ಲಿ ಆಸಕ್ತಿಯ ಕೇಂದ್ರಬಿಂದುವಾಗಿದ್ದರೆ ಅವನ ವ್ಯಕ್ತಿತ್ವದ ಘನತೆಯೇ ರೊಮ್ಯಾಂಟಿಕ್ ಕಾವ್ಯದ ಮೂಲ ನೆಲೆಯಾಗಿದೆ.

ಇಂಗ್ಲಿಷ್ ರೊಮ್ಯಾಂಟಿಸಿಸಮ್ ಗಿಂತ ಕನ್ನಡದ ನವೋದಯ ತುಂಬ ವಿಶಿಷ್ಟವಾಗಿದೆ. ಇಂಗ್ಲಿಷ್ ರೊಮ್ಯಾಂಟಿಸಿಸಂ ಆತ್ಮಕೇಂದ್ರಿತವಾದರೆ ಕನ್ನಡದ ನವೋದಯ (ರಮ್ಯ) ಜನಮುಖವಾಗಿದೆ. ಇಲ್ಲಿಯ ರಮ್ಯವಾದದಲ್ಲಿ ವೈವಿಧ್ಯತೆಯಿದೆ. ಪ್ರಾದೇಶಿಕ ಅನುಭವದ ವಿಶಿಷ್ಟ ಛಾಪು ಇದೆ. ಪಾಶ್ಚಾತ್ಯ ಕವಿಗಳ ಪ್ರೇರಣೆಯ ಜೊತೆಗೆ ಷರೀಫ್ ಸಾಹೇಬ, ಕಡಕೊಳ ಮಡಿವಾಳಪ್ಪರಂತಹ ಅನುಭಾವಿ ಕವಿಗಳ ಪ್ರಭಾವವೂ ಆಗಿದೆ. ಜಾಗತಿಕ ಚಿಂತನೆಗಳ

ಜೊತೆಗೆ ಪರಮಹಂಸ ವಿವೇಕಾನಂದ, ಅರವಿಂದರ, ಆಲೋಚನಾ ಲಹರಿಯ ಪರಿಣಾಮವನ್ನುಂಟು ಮಾಡಿದೆ.

ಪಾಶ್ಚಾತ್ಯರ ಕಾವ್ಯರೂಪಗಳಾದ ಸಾನೆಟ್, ಬ್ಲ್ಯಾಂಕ್‌ವರ್ಸ್, ಲಿರಿಕ್ಸ್, ಎಲಿಜಿ. ಫ್ರೀವರ್ಸ್‌ಗಳು ಜೊತೆಗೆ ಷಟ್ಪದಿ, ಕಂದ, ಚೌಪದಿ, ರಗಳೆಗಳಂತಹ ದೇಸಿಯ ರೂಪಗಳು ಎಳೆ, ತ್ರಿಪದಿ, ಲಾವಣಿ, ಗೀಗೀ ಪದ, ಪಾರಿಜಾತದ ಹಾಡು, ಡಪ್ಪಿನ ಹಾಡಿನಂತಹ ಜನಪದ ರೂಪಗಳು ನವೋದಯ ಕಾವ್ಯದ ಹೊಸ ರೂಪಗಳನ್ನು ಸಿದ್ಧಗೊಳಿಸಿಕೊಳ್ಳುವಲ್ಲಿ ಸಹಕಾರಿಯಾಗಿವೆ.

ನವೋದಯ ಕಾವ್ಯಕ್ಕೆ ಭಾರತದ ಸ್ವಾತಂತ್ರ್ಯ ಚಳವಳಿ ಮುಖ್ಯ ವಸ್ತುವಾಯಿತು. ದೇಶಭಕ್ತಿ, ಪ್ರಕೃತಿ, ನಾಡು-ನುಡಿಯ ಬಗ್ಗೆ ಅಭಿಮಾನ ಕಳಕಳಿ ನೀತಿ ಅಧ್ಯಾತ್ಮ ಪ್ರೇಮ, ಬಡತನ, ಹಸಿವು ಇವೆಲ್ಲವೂ ನವೋದಯ ಕಾವ್ಯದ ಮೂಲನೆಲೆಗಳಾಗಿದ್ದವು. ಹಾಗೂ ವಿಜ್ಞಾನ ಮತ್ತು ಧರ್ಮಗಳ ನಡುವೆ ಇಹಪರಗಳ ನಡುವೆ ಭಾರತೀಯ ಪಾಶ್ಚಾತ್ಯ ಸಂಸ್ಕೃತಿಗಳ ನಡುವೆ ನವೋದಯ ಕವಿಗಳು ಸಮನ್ವಯ ಸಾಧಿಸಿದರು.

ನವೋದಯದ ಮುಖ್ಯ ನೆಲೆಗಳನ್ನು ಕುರಿತು ಶಾಂತಿನಾಥ ದೇಸಾಯಿ ಅವರ ಮಾತನ್ನು ಇಲ್ಲಿ ಗಮನಿಸಬಹುದು. "ಭಾರತೀಯರು ಸಹಜವಾಗಿ ಆತ್ಮಗೌರವ, ಆಶಾವಾದಿ, ಆದರ್ಶವಾದಿಗಳ. ಜಾತ್ಯತೀತ ಪ್ರಜಾಪ್ರಭುತ್ವದ ಮೌಲ್ಯಗಳು, ವಿಶ್ವಧರ್ಮದ, ವಿಶ್ವಧರ್ಮದ, ವಿಶ್ವಭ್ರಾತೃತ್ವ ಅಧ್ಯಾತ್ಮ ಅನುಭಾವಗಳು ಇವೆಲ್ಲ ಸಮ್ಮಿಳನವಾದ ಯುಗದ ಮನೋಧರ್ಮವನ್ನು ನವೋದಯ ಪ್ರತಿಬಿಂಬಿಸಿತು. ಅದು ಮನುಷ್ಯನನ್ನು ನಿಸರ್ಗವನ್ನೊಳಗೊಂಡ ಸೃಷ್ಟಿಯಲ್ಲಿಟ್ಟು ನೋಡಿತು ಸೃಷ್ಟಿಯಲ್ಲಿ ಸರ್ವವ್ಯಾಪಿಯಾದ ಒಂದು ಚೇತನವನ್ನು ಮನುಷ್ಯ ಮತ್ತು ನಿಸರ್ಗಗಳ ನಡುವೆ ಒಂದು ಆಧ್ಯಾತ್ಮಿಕ ಬಾಂಧವ್ಯವನ್ನು ಗುರುತಿಸಿತು."[೮]

ಆಂಗ್ಲಭಾಷೆಯ ಸಂಪರ್ಕದಿಂದ ಪ್ರಭಾವಿತರಾದ ಕನ್ನಡ ಕವಿಗಳು ಹೊಸ ಬಗೆಯ ಅಭಿವ್ಯಕ್ತಿಯನ್ನು ಕಂಡುಕೊಳ್ಳಲು ಪ್ರಯತ್ನಿಸಿದರು. "ಭಾವದ ಗತಿಯನ್ನು ಅನುಸರಿಸಿ ಬದಲಾಗುವ ಹೊಸದೊಂದು ಛಂದೋವಿನ್ಯಾಸ ಕನ್ನಡದ ಪ್ರಪ್ರಥಮ ಅಗತ್ಯವಾಗಿತ್ತು. ಸಂಸ್ಕೃತದಿಂದ ಎರವಲಾಗಿ ಪಡೆದ ವೃತ್ತಗಳೂ, ಕನ್ನಡ ದೇಶೀಯ ಛಂದಗಳಾದ ರಗಳೆ, ಷಟ್ಪದಿ, ಸಾಂಗತ್ಯಗಳೂ ಸಂಪೂರ್ಣವಾದ ಯಶಸ್ಸಿನಿಂದ ನಿರ್ವಹಿಸಲು ಸಾಧ್ಯವಲ್ಲದ ಭಾವಭಾವನಾ ವೈವಿಧ್ಯಗಳಿಗೆ ತಕ್ಕ ಛಂದೋಪಾತ್ರಗಳ ಸೃಷ್ಟಿಯಾಗಬೇಕಾಯಿತು".

ಕಂದ ಸಂಸ್ಕೃತ ವೃತ್ತಗಳಲ್ಲಿ ನಾಲ್ಕು ಚರಣಗಳು, ಷಟ್ಪದಿಗಳಲ್ಲಿ ಆರು ಚರಣಗಳು ಈ ರೀತಿಯ ಅತಿ ನಿಯತವಾದ ಚರಣಸಂಖ್ಯೆಯೂ ಅವುಗಳ ಅತಿಬದ್ಧವಾದ ಗತಿಯೂ ಕವಿಯ

ಹೃದಯದಲ್ಲಿ ಜನಿಸುವ ಅನಂತ ಭಾವಗಳಲ್ಲಿ ಎಲ್ಲವನ್ನು ಉತ್ಕೃಷ್ಟವಾಗಿ ನಿರೂಪಿಸಲಾರವು. ಆದಕಾರಣ ಭಾವದ ಗತಿಗೆ ತಕ್ಕಂತೆ ಬಳುಕುವ ಬೇಕೆಂದಾಗ ಹಿಗ್ಗುವ, ತುಂಬುವ ಹೊಳೆಯಂತೆ ಮೊರೆಯುವ ಸಣ್ಣಕಾಲುವೆಯಂತೆ ನುಸುಳುವ ಓಡುವ ಕುದುರೆ ನಿಲ್ಲುವಂತೆ ತಟ್ಟನೆ ನಿಲ್ಲುವ ವಿವಿಧಗತಿಯ ಮಟ್ಟಗಳು ಕನ್ನಡಕ್ಕೆ ಬೇಕಾದವು. ಹೊಸ ಮಾದರಿಯನ್ನು ಕಂಡುಹಿಡಿಯಬೇಕಾಯಿತು. ಈ ಕಾರ್ಯದಲ್ಲಿ ಆಧುನಿಕ ಕವಿಗಳು ಸಂಪೂರ್ಣವಾಗಿ ಹೊಸ ಮಾರ್ಗವನ್ನೇ ಹುಡುಕುವುದು ಅವಶ್ಯಕವಾಗಲಿಲ್ಲ, ಇವರು ಬಯಸುತ್ತಿದ್ದ ಸ್ವಾತಂತ್ರ್ಯವನ್ನೇ ಹಿಂದಿನವರೂ ಬಯಸಿ ಅಲ್ಲಲ್ಲಿ ಹೊಸ ಮಟ್ಟವನ್ನು ಏರ್ಪಡಿಸಿಕೊಂಡಿರುವುದು ಪ್ರಾಚೀನ ಸಾಹಿತ್ಯದಲ್ಲೇ ನಮಗೆ ಗೋಚರಿಸುತ್ತದೆ.

ಬಿ.ಎಂ.ಶ್ರೀಯವರು ಹೊಸಗನ್ನಡ ಕಾವ್ಯದ ಪಿತಾಮಹ. ಬಿ.ಎಂ.ಶ್ರೀ.ಯವರ ಗೀತೆಗಳು ಸಹಜ ಅನುವಾದದಿಂದ ಗಮನ ಸೆಳೆಯುತ್ತಿವೆ. ಅವರ ಗೀತೆಗಳಾದ 'ನನ್ನ ಪ್ರೀತಿಯ ಹುಡುಗಿ', 'ಅಡವಿಮರದಡಿಯಲಿ, 'ಬಸಂತ', 'ಮಳೆಬಿಲ್ಲು', 'ಮುದ್ದಿನ ಕುರಿಮರಿ', 'ಕಳಗದಪದ', 'ಕರುಣಾಳು ಬಾ ಬೆಳಕೆ' ಮುಂತಾದ ಗೀತೆಗಳು ಉತ್ತಮ ಅನುವಾದಗಳಾಗಿವೆ. ಹಾಗೆಯೇ ಗೋವಿಂದಪೈ, ಎಸ್.ಅನಂತ-ನಾರಾಯಣ, ಪಂಜೆ ಮಂಗೇಶರಾಯ, ಮುಂತಾದವರು ಕನ್ನಡ ಇಂಗ್ಲಿಷ್ ಭಾಷೆಗಳೆರಲ್ಲೂ ಅಪಾರ ಪಾಂಡಿತ್ಯವನ್ನು ಹೊಂದಿ ಇಂಗ್ಲಿಷ್ ಭಾಷೆಗಳೆಡರಲ್ಲೂ ಅಪಾರ ಪಾಂಡಿತ್ಯವನ್ನು ಹೊಂದಿ ಇಂಗ್ಲಿಷ್ ಭಾಷೆಯ ಹಲವಾರು ಕವನಗಳನ್ನು ಕನ್ನಡಕ್ಕೆ ಅನುವಾದಿಸಿ ಅವರ ಅಪಾರ ಪಾಂಡಿತ್ಯವನ್ನು ಕೊಡುಗೆಯಾಗಿ ನೀಡಿದ್ದಾರೆ.

ಬಿ.ಎಂ.ಶ್ರೀಯವರು ಎಳೆದುತಂದ ಈ ಹೊಸತನದ ಮಿಂಚನ್ನು ಬೇಂದ್ರೆ, ಕುವೆಂಪು, ಪುತಿನರವರು ಅಚ್ಚುಕಟ್ಟಾಗಿ ಮುಂದುವರೆಸಿಕೊಂಡು ಕನ್ನಡಕ್ಕೊಂದು ಸ್ವಂತಿಕೆ ನೆಲೆಯನ್ನು ನಿರ್ಮಾಣಮಾಡಿದ್ದಾರೆ.

"ಕನ್ನಡ ನವೋದಯದಲ್ಲಿ ಅತ್ಯಂತ ಮುಖ್ಯವಾದ ಅಂಶವೆಂದರೆ ಪ್ರಕೃತಿಯ ದೈವೀಕರಣ" ಪ್ರಕೃತಿಯನ್ನು ಕುರಿತಾಗಿ ಆನಂದದ ಹುಚ್ಚುಮೂಡಿ ಬೆಳೆದು ಜೀವನವನ್ನೆಲ್ಲಾ ಆಕ್ರಮಿಸಿಕೊಂಡಿರುವ ಕವಿ 'ಕುವೆಂಪು'ರಂತಹ ಮತ್ತೊಬ್ಬ ಕವಿಯನ್ನು ಕನ್ನಡ ಸಾಹಿತ್ಯದಲ್ಲಿ ಎದುರುಗೊಳ್ಳುವುದು ಕಷ್ಟ. ಪ್ರಧಾನವಾಗಿ ಕುವೆಂಪು ಪ್ರಕೃತಿ ಕವಿ, ಪ್ರಕೃತಿಯ ಮಡಿಲಿನಲ್ಲಿ ಹುಟ್ಟಿದವರು. ಅದನ್ನು ನೋಡುತ್ತಾ ಬೆಳೆದವರು. ಎಳಮೆಯಿಂದಲೂ ಅದರ ಅಂತರಂಗದ ಆತ್ಮೀಯ ಸ್ಪರ್ಶವನ್ನು ಪಡೆದಿದ್ದಾರೆ. ತನ್ನನ್ನು ಒಲಿದು ಏಕಾಗ್ರತೆಯಿಂದ ಆರಾಧಿಸಿದ ಈ ಚೇತನ ಪ್ರಕೃತಿಯೂ ತನ್ನ ಅಂತರಂಗದ ಶ್ರೀಮಂತ ಭಂಡಾರವನ್ನು ಬಹಿರಂಗ ಸೌಂದರ್ಯವೆಂತೋ ಅಂತು ನಿರ್ವಂಚನೆಯಿಂದ ಸೂರೆಗೊಟ್ಟಿದರು. ಆದ್ದರಿಂದಲೇ ಆ

ಅನುಭವದ ಭಾರದಿಂದ ಬಳುಕುತ್ತಿರುವ ಅನೇಕ ಶ್ರೇಷ್ಠ ಕವನಗಳನ್ನು ಕನ್ನಡಕ್ಕೆ ಕಾಣಿಕೆಯಾಗಿ ನೀಡಿದ್ದಾರೆ.

ಅವುಗಳಲ್ಲಿ 'ಆನಂದಮಯ ಈ ಜಗಹೃದಯ' ಎಂಬ ಕವಿತೆಯಲ್ಲಿ ಪ್ರಕೃತಿಯ ಸೊಬಗನ್ನು ಈ ರೀತಿ ಬಣ್ಣಿಸಿದ್ದಾರೆ.

**"ಆನಂದಮಯ ಈ ಜಗಹೃದಯ**
**ಏತಕೆ ಭಯ? ಮಾಣೋ!**
**ಸೂರ್ಯೋದಯ ಚಂದ್ರೋದಯ**
**ದೇವರ ದಯ ಕಾಣೋ।**
**ಬಿಸಿಲಿದು ಬರಿ ಬಿಸಿಲಲ್ಲವೋ**
**ಸೂರ್ಯನ ಕೃಪೆ ಕಾಣೋ**
**ಸೂರ್ಯನು ಬರಿ ರವಿಯಲ್ಲವೋ**
**ಆ ಭ್ರಾಂತಿಯ ಮಾಣೋ**
**ರವಿ ವದನವೆ ಶಿವ ಸದನವೊ**
**ಬರಿ ಕಣ್ಣದು ಮಾಣೋ!**
**ಶಿವನಿಲ್ಲದ ಸೌಂದರ್ಯವೇ**
**ಶಿವ ಮುಖದ ಕಾಣೋ**
**ಆನಂದ ಮಯ ಈ ಜಗ ಹೃದಯ"**

ಸೌಂದರ್ಯ ಶಿವಾತ್ಮಕವಾದದ್ದು. ಶಿವನನ್ನು ಉಳಿದು ಅದು ಮೈದೋರುವಂತಿಲ್ಲ. ಮೈದೋರಲು ಪ್ರಯತ್ನಿಸಿತೋ ಅದು ಶಿವಮುಖದ ಕಣ್ಣಾಗುತ್ತದೆ. ಪ್ರಕೃತಿ ಸೌಂದರ್ಯದ ಆಸ್ವಾದನೆಯೇ ಪರಮಾತ್ಮನ ಆರಾಧನೆ ಎನ್ನುವ ಶ್ರದ್ಧೆ ಕವಿಗೆ ಇದೆ. ಮೇಲಿನ ಸಾಲುಗಳು ಒಟ್ಟಾರೆಯಾಗಿ ನವೋದಯ ಪ್ರಕೃತಿ ದರ್ಶನದ ಒಂದು ಮುಖವನ್ನು ಸೂತ್ರೀಕರಿಸಿ ಹೇಳುತ್ತೇವೆ. ಆದ್ದರಿಂದಲೇ ಕುವೆಂಪು ಅವರ ಈ ಕವನ ಪ್ರಾತಿನಿಧಿಕವಾಗಿದೆ ಎಂದು ಡಿ.ಆರ್. ನಾಗರಾಜು ಹೇಳಿದ್ದಾರೆ.

ವಿಶ್ವದ ಚಲುವನ್ನು ಗುರುತಿಸುವುದು, ಅದನ್ನು ಆಸ್ವಾದಿಸುವುದೂ ದೇವರ ಅಹೇತಕ ಕರುಣೆಯಿಂದಲೇ ಎಂಬುದು ಪುತಿನ ಅವರ ಅಚಲ ವಿಶ್ವಾಸ

**'ಜಗ ಚೆಲುವೆನ್ನುವ ಭಯಾನುಕರಣನೆ**
**ವಿಶ್ವಾತ್ಮನ ನಿರ್ಹೇತುಕ ಕರಣೆ!'**

ಎನ್ನುತ್ತಾರೆ. ಅವರು ಜಗದ ಚೆಲುವಿನ ಒಂದು ಮುಹೂರ್ತದ ಆಸ್ವಾದನೆಯಿಂದ ತೃಪ್ತಿಪಡೆದ ಅವರ ಮನಸ್ಸು ಕ್ಷಣ ಮಾತ್ರದಲ್ಲಿಯೇ ಚಿಂತನಾಮಗ್ನವಾಗುತ್ತದೆ. ಚಿಂತನೆ ಅವರ ಕವನದಲ್ಲಿ ಭಾವದ ಭಾವತೀವ್ರತೆಯಾದರೂ ಒಮ್ಮೊಮ್ಮೆ ಕಡಿಮೆಯಾಗಬಹುದು. ಆದರೆ ಚಿಂತನೆಯ ಪ್ರಖರತೆ ಮುಸುಳುವಂತಿಲ್ಲ. ಮೇಲೆ ಹೇಳಿರುವ ಪದ್ಯದಲ್ಲಿ ಒಂದಾದ ಮೇಲೊಂದು ಚಿತ್ರಗಳ ಪರಂಪರೆ ಬರುತ್ತದೆ. ಮೇಲು ಗಾಳಿಯಲ್ಲಿ ತಿಡದಲೆ ಹೊರಳುತ್ತಿದೆ. ತಿಳಿಗೊಳ್ಳದಲ್ಲಿ ಕಿರಿಯ ತೆರೆಗಳು ಉರುಳುತ್ತಿವೆ. ನಡುಬಾನಿನಲ್ಲಿ ಬಿಳಿಯ ಮುಗಿಲು ಆಡುತ್ತಿದೆ. ಗುಡಿಯ ಗಂಟೆಯ ದನಿ ಆಕಶದಲ್ಲಿ ಮುಳುಗುತ್ತಿದೆ. ಅಲ್ಲಿ ಮುಳುಗಿರುವ ಭಾವಗಳನ್ನು ಮೇಲೆತ್ತಲೆಂಬಂತೆ ಸಂಪಗೆಯ ನೆಳಲು ತೊಟ್ಟುಲಾಡುತ್ತಿದೆ. ಬಿಸಿಲಿನ ಬಿಳಲು ನೆರಿಳಿಗೆ ಬಿದ್ದಿವೆ ಹಿಣಿಲನ್ನು ಕುಣಿಸುತ್ತಾ, ಬಸವ ಬರುತ್ತಿದೆ. ರೆಂಬೆಯನ್ನು ಆಲಂಬಿಸಿ ಕವಿ ಕುಳಿತಿದೆ. ಬಂಡೆಗಳೊಡನೆ ಸ್ನೇಹದಿಂದ ಕುರಿಯ ಮುಂದೆ ಚಳಿಸುತ್ತಿದೆ. ಮಲೆ ಉಸಿರಾಡುತ್ತಿದೆಯೋ ಎಂಬಂತೆ ಈ ಚಿತ್ರವನ್ನು ನೀಡಿ ಕವಿ ಕೇಳುತ್ತಾರೆ.

ಪ್ರಕೃತಿಯ ಸೌಂದರ್ಯ ಅದನ್ನು ಕಾಣುವ ಕವಿಯ ಮನಸ್ಸಿಗೆ ಉಲ್ಲಾಸ ಸಂತೋಷವನ್ನು ತರುತ್ತದೆ ಎಂಬುದನ್ನು ಸಾಮಾನ್ಯ ಭಾವನೆಯಾಗಿವೆ. ಆದರೆ ಪುತಿನ ಅವರ ಒಂದೆರಡು ಕವನಗಳು ಈ ಭಾವನೆ ಅರ್ಧ ಸತ್ಯ ಮಾತು ಎಂಬುದನ್ನು ತೋರಿಸುತ್ತವೆ. 'ಒಂದು ಸಂಜೆ' ಹಾಗೂ ಬಾನ್ ತಿಳಿದಿತ್ತು ಎಂಬ ಕವನಗಳು ಈ ನಿಟ್ಟಿನಲ್ಲಿ ಗಮನಿಸಬಹುದಾದ ಕವನಗಳಾಗಿವೆ. ಸಂಜೆಯ ಚಲುವನ್ನು ಕಂಡು ಕವಿ ವಿಷಾದ ಪಡುವಂತೆ 'ಒಂದು ಸಂಜೆ' ಕವನ ಚಿತ್ರಿಸಲಾಗಿದೆ.

**ಹೊತ್ತು ಮುಳುಗಿತು – ಮಾಸಿ ಹೋಯಿತು**
**ಭೂಮಿ ಹೊರಳುವ ನಸುಕೊಳು**
**ತಾಯಿ ಕಣ್ಮರೆಯಾಗಿ ಧೂಳಿನೊ**
**ಳಾಡಿ ಮಾಸುವ ಮಗುಮೊಲು**
**ಕತ್ತಲಾಯಿತು ಹೊಲೆದುವಿದುಗೋ**
**ಮೇಲೆ ಚುಕ್ಕುಗಳಂದದಿ**
**ಅಂಧಕಾರದ ತೆರೆಗಳಾವುದೋ**
**ಬೆಲಕ ಬಿಂಬಿಸುವಂದದಿ**
**ತಲದಿ ನಾನಿಹೇನಿ ಪುರಾತನ**
**ತಮಕ ತಾರಿಗು ಮೋಹಿಸಿ**
**ನಿಜವಿಷಾದೊಳಲ್ಲಿಗಲ್ಲಿಗೆ**
**ಹೊಳೆವ ಭಾವಕ್ಕೆ ಹೋಲಿಸಿ**

**(ಪುತಿನ – ರಸಸರಸ್ವತಿ, ಪು. ೩೭)**

ಸಂಜೆಯ ವರ್ಣನೆಯನ್ನು ಮಾಡುತ್ತಾ ಬರುವ ಕವಿಯನ್ನು ಇದ್ದಕ್ಕಿದ್ದಂತೆ ವಿಷಾದದ ಛಾಯೆ ಆವರಿಸಿ ನಮ್ಮನ್ನು ವಿಸ್ಮಯಗೊಳಿಸುತ್ತದೆ. ಪ್ರಕೃತಿ ಸೌಂದರ್ಯದಿಂದ ಸಂತೋಷ ಉಂಟಾಗುವ ಬದಲು ಅಳಲು ಮೂಡಿರುವುದನ್ನು ಇಲ್ಲಿ ಕಾಣುತ್ತೇವೆ.

ದ.ರಾ.ಬೇಂದ್ರೆಯವರು ಈ ಕವನದಲ್ಲಿ ಸೂರ್ಯೋದಯ ಮತ್ತು ಸೂರ್ಯಾಸ್ತದ ವರ್ಣನೆಯನ್ನು ತುಂಬಾ ಮನೋಹರವಾಗಿ ಬಣ್ಣಿಸಿದ್ದಾರೆ. ಸೂರ್ಯ ಮೂಡಿದಾಗ ಅವನ ಕಿರಣವು ಚೂರುಚೂರಾಗಿ ದಿಕ್ಕುದಿಕ್ಕಿಗೆಲ್ಲಾ ಪಸರಿಸಿ ನಿಶೆಯನ್ನು ನಕ್ಕಿತಂತೆ ಈ ಕಿರಣಗಳು ಉಲ್ಕೆಗಳಂತೆ ಬಿದ್ದಾಗ ಕತ್ತಲರಾಜ ಚಂದಿರನು ಮರೆಯಲ್ಲಿ ಅವಿತು ಸೂರ್ಯನ ಪ್ರಭೆಯನ್ನು ಇಣಕಿ ನೋಡುತ್ತಿದ್ದನಂತೆ. ಎಲ್ಲಾ ಜೀವಕೋಟಿಗಳಿಗೂ ಜೀವದ್ರವ್ಯ ಸೂರ್ಯ ಇವ ಬಂದ ಕೂಡಲೇ ಸಸ್ಯ ಸಂಕುಲಗಳು ಭೂಮಿಯ ತುಂಬೆಲ್ಲಾ ಕುಸುಮ ಹಾಸಿಗೆಯನ್ನು ಹಾಸಿ, ಬೇಲಿ ಬೇಲಿಯಲ್ಲಿಯೂ ಹಕ್ಕುಗಳ ಸುಪ್ರಭಾತವು ಕೇಳಿ ಬರುತ್ತದೆ.

ಮೌನವು ಮೌನದಲ್ಲಿ ಹೆಪ್ಪುಗೊಂಡಿರಲು ಈ ಅವರ್ಣನೀಯವಾದ ನೋಟವನ್ನು ಮೌನದಿಂದ ಸವಿಯಬೇಕೆ ಹೊರತು ಬಣ್ಣಿಸಲು ನಿಲುಕುವುದಿಲ್ಲ ಎಂದು ಆ ನೋಟವನ್ನು ಬೇಂದ್ರೆಯವರು ವರ್ಣಿಸುತ್ತಾರೆ.

ಡಾ.ಎನ್.ಜಗದೀಶ್ ಕೊಪ್ಪರವರು ಶ್ರಾವಣಮಾಸದ ಬಗ್ಗೆ ಹೀಗೆ ಹೇಳಿದ್ದಾರೆ. "ಬೇಂದ್ರೆಯವರ ಪಾಲಿಗೆ ಮನುಷ್ಯನ ಎಲ್ಲಾ ಮಾಯದ ಗಾಯಗಳಿಗೆ ಶ್ರಾವಣ ನೋವು ಶಮನ ಮಾಡುವ ಮುಲಾಮು ಇದ್ದ ಹಾಗೆ, ಅವರ ಪಾಲಿಗೆ ಮನುಷ್ಯನನ್ನು ನೋಯಿಸುವ, ಹಿಂಸಿಸುವ ಎಲ್ಲಾ ಸಂಗತಿಗಳು ಕಾಣೆಯಾಗುತ್ತವೆ" ಎಂದು ಹೇಳಿದ್ದಾರೆ.

'ಶ್ರಾವಣ ಬಂತು ಕಾಡಿಗೆ' ಎಂಬ ಕವನದಲ್ಲಿ ಹೀಗೆ ಹೇಳಿದ್ದಾರೆ.

**ಶ್ರಾವಣ ಬಂತು ಕಾಡಿಗೆ। ಬಂತು ನಾಡಿಕೆ।**
**ಬಂತು ಬೀದಿಗೆ। ಶ್ರಾವಣ ಬಂತು॥**
**ಕಡಲಿಗೆ ಬಂತು ಶ್ರಾವಣಾ। ಕುಣಿದ್ಹಾಂಗ ರಾವಣ।**
**ಕುಣಿದಾವ ಗಾಳಿ। ಭೈರವನ ರೂಪತಾಳಿ॥** (ಪು. ೯೫)

ಎಂದು ಹರುಷದಿಂದ ಹಾಡಿದ್ದಾರೆ. ಕವನದ ಪ್ರಥಮದಲ್ಲಿ ಶ್ರಾವಣ ಕಾಡಿಗೆ ಬಂದ ಹಾಗೂ ನಾಡಿಗೆ ಬಂದ ಚಿತ್ರಣವನ್ನು ನೀಡಿದ್ದಾರೆ. ರಾವಣನು ರುದ್ರ ನರ್ತನ ಮಾಡಿದಾ ಹಾಗೆ ಕಡಲಿಗೆ ಬಂತು ಶ್ರಾವಣ, ಹಾಗೆಯೇ ಶ್ರಾವಣನ ಜೊತೆಗೆ ಬರುವ ಗಾಳಿಯನ್ನು ಭೈರವನ ನಾಟ್ಯಕ್ಕೆ ಹೋಲಿಸಿದ್ದಾರೆ.

ಈ ರೀತಿಯಾಗಿ ಇನ್ನು ಹಲವು ಕಥೆ ಕವನ, ಕಾದಂಬರಿಗಳಲ್ಲಿ ಪ್ರಕೃತಿಯ ವರ್ಣನೆಯನ್ನು ಗಮನಿಸಬಹುದು.

ಪ್ರಸಿದ್ಧಿ ಪಡೆದ ಮತ್ತೊಬ್ಬ ಕವಿ ಡಿ.ವಿ.ಗುಂಡಪ್ಪನವರು ರಚಿಸಿರುವ 'ಮಂಕುತಿಮ್ಮನ ಕಗ್ಗ' ದಲ್ಲಿ ಪ್ರಕೃತಿಗೆಂದೇ ಮೀಸಲಾದ ಕವಿತೆಗಳು ಇಲ್ಲದೆ ಹೋದರೂ ಕಗ್ಗವನ್ನು ಹೊಸೆಯುವಾಗ ಉಪಮಾನವನ್ನು ಬಳಸುವಾಗ ಪ್ರಕೃತಿಯನ್ನು ವರ್ಣಿಸಿದ್ದಾರೆ. ಈ ಪ್ರಕೃತಿ ವರ್ಣನೆಗೆ ಅಪಾರ ಶಕ್ತಿ ಇರುವುದನ್ನು ಗಮನಿಸಬಹುದು.

**ಎತ್ತಲೋ ಕಾಡು ಮಬ್ಬಿನ ಬಳ್ಳಿ ಮೊಗ್ಗಿನಲ್ಲಿ**
**ಚಿತ್ರರಚನೆಗದೇಕೆ ತೊಡುಗುವಳು ಪ್ರಕೃತಿ?**
**ಕೃತ್ಯಕ್ಕೆ ತಾಂ ತರುವ ಶಕ್ತಿಗುಣ ಪೂರ್ಣತೆಯ**
**ಸಾರ್ಥಕವೊ ಜೀವಿಕತೆ!**

ಪ್ರಕೃತಿ ಕಾಡಿನ ಯಾವುದೋ ಒಂದು ಮೂಲೆಯಲ್ಲಿರುವ ಹೂವಿಗೂ ಸೌಂದರ್ಯವನ್ನು ತುಂಬಿರುತ್ತಾಳೆ. ಮತ್ತು ಯಾವುದೇ ವನಸ್ಪತಿಗೂ ಭೇದವನ್ನು ಎಣಿಸುವುದಿಲ್ಲ ಎಲ್ಲವನ್ನು ಸುಂದರವಾಗಿ ಮಾಡಬೇಕೆಂಬುದೇ ಪ್ರಕೃತಿಯ ಉದ್ದೇಶವಾಗಿರುತ್ತದೆ. ಒಂದಾನೊಂದು ಸಮಯದಲ್ಲಿ ಮನುಷ್ಯನಿಗೆ ಪ್ರಕೃತಿಯೇ ಗುರುವಾಗಿತ್ತು. ಆದರೆ ಮನುಷ್ಯ ಸ್ವಾರ್ಥದಿಂದ ತನ್ನ ಅನುಕೂಲಕ್ಕಾಗಿ ಅದನ್ನು ವಿಕೃತಗೊಳಿಸುತ್ತಾ ಬಂದಿದ್ದಾನೆಂಬ ಮಹತ್ವ ಪೂರ್ಣವಾದ ವಿಚಾರಗಳೆಲ್ಲವನ್ನೂ ಡಿ.ವಿ.ಜಿ. ಅವರು 'ಕಗ್ಗ'ದಲ್ಲಿ ಅಳವಡಿಸಿದ್ದಾರೆ.

ಹಿರಿಯ ಕವಿ ವಿ.ಸೀತಾರಾಮಯ್ಯ ಇವರು ಪ್ರಕೃತಿಯ ಸೌಮ್ಯ ಹಾಗೂ ರುದ್ರರೂಪಗಳೆರಡನ್ನು ತಮ್ಮ ಕವಿತೆಗಳ ಮೂಲಕ ಚಿತ್ರಣ ಮಾಡಿದ್ದಾರೆ. ತುಂಬಾ ಸರಳವಾಗಿ ಮಧುಮಾಸದ ಬೆಡಗನ್ನು ಸವಿಯುವಂತೆ, ಬೇರೆಯವರಿಗೂ ಆಹ್ವಾನ ಕೊಡುತ್ತಾ ಪ್ರಸಿದ್ಧವಾದ ಉದ್ಯಾನವನ್ನು ವರ್ಣಿಸುತ್ತಾರೆ.

ವಿ.ಸೀತಾರಾಮಯ್ಯರವರು ಮರವನ್ನು ಸಾಂಕೇತವಾಗಿ ಬಳಸಿಕೊಂಡು ಅದು ಹೇಗೆ ಬಿಸಿಲು, ಮಳೆ, ಬಿರುಗಾಳಿಗೂ ಜಗ್ಗದೆ ಎಲ್ಲಾ ಕಾಠಿಣ್ಯವನ್ನು ಸೀಳಿಕೊಂಡು ಹೆಮ್ಮರವಾಗಿ ಬೆಳೆಯುತ್ತದೆಯೋ ಹಾಗೆಯೇ ಮನುಷ್ಯನು ಕೂಡ ಎಂಥಹ ಕಷ್ಟ ಕಾರ್ಪಣ್ಯಗಳು ಬಂದರು ಎಲ್ಲಾವನ್ನು ಎದುರಿಸುತ್ತ ಯಾವುದಕ್ಕೋ ಅಂಜದೆ ಹೆಮ್ಮರವಾಗಿ ಮಾನವನು ನಿಲ್ಲಬೇಕು ಎಂಬುವುದನ್ನು ಹೇಳುತ್ತಾರೆ.

ಮುಂದೆ ಶಿಶಿರ ಋತುವಿನಲ್ಲಿ ಕೂಗುವ ಕೋಗಿಲೆಯ ಧ್ವನಿಯಲ್ಲಿ ಸುಖದ ಕಿರಣವನ್ನು ಕಾಣುವ ಧ್ವನಿಯನ್ನು ಅಡಗಿಸಿದ್ದಾರೆ.

"ಹಿಮಕರನ ಬಳಿ ಕಿರಣ ನಗೆ ಬೀರುವಂತಿಲ್ಲ
ಬೆಳದಿಂಗಳುಂಡಾರು ಆಡುವವರಿಲ್ಲ
ಹಸುರಿನಿಸು ಕಾಣದಿಹ
ಬರಲು ಕೊಂಬೆಗಳೇಂ
ಮರದ ತುದಿಯನ್ನು ಸಾರಿ
ಏಕಾಂಗಿ ನೀನೇಕೆ ಉಳಿಯುತಿಹೆ ಇಂತು"

(ವಿ.ಸೀತಾರಾಮಯ್ಯ, ಸಮಗ್ರಕಾವ್ಯ, ಪು. ೧೨೯-೧೩೦)

ವಾತಾವರಣವೆಲ್ಲ ಹಿಮದಿಂದ ಆವೃತ್ತವಾಗಿರುವುದರಿಂದ ಜೊತೆಗಾರ ಪಕ್ಷಿಗಳಾವುವು ಅಲ್ಲಿ ಕಾಣುತ್ತಿಲ್ಲ ಮರದ ತುತ್ತ ತುದಿಯಲ್ಲಿ ಏಕಾಂಗಿಯಾಗಿ ಕುಳಿತು ಕೋಗಿಲೆ ಮಾತ್ರ ಆನಂದದಿಂದ ಹಾಡುತ್ತಿದೆ. ಇದಕ್ಕೆ ಕಾರಣವೇನಿರಬಹುದು ಎಂಬುದು ಕವಿಯ ಪ್ರಶ್ನೆ. ಅದು ಮನುಷ್ಯನಿಗೆ ತಿಳಿಯದ ಯಾವುದೋ ಗಹನವಾದ ವಿಚಾರವನ್ನು ಕುರಿತು ಚಿಂತನೆ ಮಾಡುತ್ತಿರಬಹುದು. ಅಥವಾ ಅದರ ಸೂಚನೆಯನ್ನು ಮನುಷ್ಯನಿಗೆ ನೀಡುತ್ತಿರಬಹುದೇ? ಆಷಾಡ ಮಾಸದಲ್ಲಿ ಬೀಸುವ ಗಾಳಿಯನ್ನು ಕವಿ ಸ್ವಾಗತಿಸುತ್ತಾ ಹೀಗೆ ಹೇಳುತ್ತಾರೆ.

ಎಸ್.ವಿ.ಪರಮೇಶ್ವರ ಭಟ್ಟರು ಮಲೆನಾಡಿನಲ್ಲಿ ಹುಟ್ಟಿ ಬೆಳೆದು ಅಲ್ಲಿಯ ಪ್ರಕೃತಿ ಸೌಂದರ್ಯದ ಸೊಬಗನ್ನು ಸವಿದವರು. ಇವರು ಸರಳ ಸುಂದರ ಶೈಲಿಯಲ್ಲಿ ಪ್ರಕೃತಿ ಗೀತೆಗಳನ್ನು ರಚಿಸಿದ್ದಾರೆ. ಪ್ರಕೃತಿಯ ಸೊಬಗನ್ನು ಕಂಡು ಅದರಿಂದ ಆನಂದವನ್ನು ಪಡುವುದರ ಜೊತೆಗೆ ಮನುಷ್ಯ ಅದರಿಂದ ಕಲಿಯುವುದು ಬಹಳವಿರುತ್ತದೆ. ಆದ್ದರಿಂದ ಪ್ರಕೃತಿಯನ್ನು ನೋಡಿ ಸಂಸ್ಕಾರ ಹೊಂದಬೇಕು ಎಂದು ಅದರ ಕವಿತೆಯಲ್ಲಿ ಹೇಳುತ್ತಾರೆ.

"ಹೇಮಂತನಾಳ್ವಿಕೆಯ ಕಠಿಣಶಾಸನವಿಂತು
ಅದಕೆ ತಲೆವಾಗುವುದ ಸೃಷ್ಟಿಯೊಳಮರ್ಮ
ಒಂದೊಂದು ಋತುವಿನಲ್ಲಿ ಒಂದೊಂದು ರೀತಿಯಲ್ಲಿ
ಸಂಸ್ಕಾರ ಪಡೆವುದೇ ಜೀವಗಳ ಧರ್ಮ"

(ಎಸ್.ವಿ.ಪರಮೇಶ್ವರ ಭಟ್ಟ, ಆಯ್ದ ಕವನಗಳು, ಪು. ೪೫)

ಹೇಮಂತ ಋತುವಿನ ಆಗಮನ ಆಯಿತೆಂದರೆ ಕಷ್ಟ ಆಗಬಹುದು. ಆದರೆ ಮನುಷ್ಯ ಅದಕ್ಕೆ ಹೆದರದೆ ಅದಕ್ಕೆ ತಲೆಬಾಗಿಸುವುದೇ ಸೃಷ್ಟಿಯ ನಿಯಮವೆನ್ನುತ್ತಾರೆ. ಹೀಗೆ ಪ್ರತಿಯೊಂದು ಋತುವಿನ ಆಗಮನವಾದಾಗಲೂ ಮನುಷ್ಯ ಒಂದೊಂದು ರೀತಿಯ ಪಾಠವನ್ನು ಕಲಿತು ಸಂಸ್ಕಾರ ಹೊಂದಬೇಕು ಎಂದು ಸರಳ ಶಬ್ದದಿಂದ ಪದ್ಯವನ್ನು ಹೆಣೆದು ಅದರಲ್ಲಿ ದೊಡ್ಡ ನೀತಿಯನ್ನೇ ಕವಿ ವರ್ಣಿಸಿದ್ದಾರೆ.

ಆಧುನಿಕ ಕಾವ್ಯದಲ್ಲಿ ಕೃಷಿ ಮಾಡಿದವರಲ್ಲಿ ಇನ್ನೊಬ್ಬ ಕವಿ ಜಿ.ಎಸ್.ಶಿವರುದ್ರಪ್ಪ ಸಾಹಿತ್ಯದಲ್ಲಿ ಅಷ್ಟೇ ಅಲ್ಲದೆ ವಿಮಾರ್ಶಾ ಕ್ಷೇತ್ರದಲ್ಲೂ ಸಾಕಷ್ಟು ಕೆಲಸ ಮಾಡಿದ್ದಾರೆ. ತುಂಬಾ ಸರಳವಾದ, ವಿಶಿಷ್ಟವಾದ ಕಲ್ಪನೆಗಳನ್ನು ಹೊಂದಿರುವುದೇ ಇವರ ಕವಿತೆಗಳ ವಿಶೇಷ. ಕವಿ ಎಲ್ಲೆಲ್ಲಿ ಪೃಕೃತಿಯನ್ನು ಕಂಡುಕೊಳ್ಳುತ್ತಾನೆ ಹಾಗೂ ಕವಿಗಾಗಿ ಪ್ರಕೃತಿ ಯಾವ ಯಾವ ಕಾಣಿಕೆಗಳನ್ನು ನೀಡುತ್ತದೆ ಮತ್ತು ಭಾವನೆಗಳನ್ನು ಉದ್ದೀಪಿಸುತ್ತದೆ ಎನ್ನುವುದನ್ನು ಹೇಳಿಕೊಳ್ಳುತ್ತಾರೆ. ಇಂತಹ ಪ್ರಕೃತಿ ಮಾನವನಿಗೆ ನೀತಿ ಬೋದೆ ಮಾಡುವುದನ್ನು ಅವರ ಕವಿತೆಯಲ್ಲಿ ಗಮನಿಸಬಹುದು.

**ಕಡಲೆಡೆಗೆ ನಡೆವ ಹೊಳೆ**
**ಅತ್ತಿತ್ತ ತಲೆದೂಗಿ ದಾರಿಯುದ್ದಕು ನಿಂತು**
**ನಸುನಗುವ ಹಸಿರು ಬೆಳೆ**
**ಒಂದೆರಡೆ? ನೂರಾರು ಮಡು**
**ಸೋತನದಿ ಅಲ್ಲಲ್ಲಿ ವಿಶ್ರಮಿಸಿ ನಿಲ್ದಾಣ**
**ಮತ್ತೆ ಪಯಣ**
**ಕಿರಿಯೊಲವಿನ ಮಡುವ**
**ದಾಟಿ ಮುನ್ನುಡೆವುದೇ**
**ಸಿಕ್ಕುವುದು ಮುಂದೊಮ್ಮೆ ಹಿರಿಯ ಕಡಲು**
**ಮೇಲೆ ಬೆಳಕಿನ ಬೆರಳು**
**ದಾರಿ ತೋರುತಲಿರಲು**
**ಯಾತ್ರ ಸಾರ್ಥಕವಹುದು ಶ್ರದ್ಧೆಯಿರಲು**

**(ಸಮಗ್ರಕಾವ್ಯ, ಜಿ.ಎಸ್.ಶಿವರುದ್ರಪ್ಪ, ಪು. ೬೭–೬೮)**

ಇದೊಂದು ಕಲಾತ್ಮಕ ಕವಿತೆ. ಮನುಷ್ಯನ ಬದುಕು ನಿಂತ ನೀರಾಗದೆ ಹರಿವ ನೀರಾಗಬೇಕು. ಇದೇ ಅವನ ಗುರಿ. ಈ ಗುರಿ ಮುಟ್ಟಬೇಕಾದರೆ ಶ್ರದ್ದೆ ಇರಬೇಕು. ಹಾಗಿದ್ದರೆ ಮಾತ್ರ ಜೀವನ ಗುರಿಮುಟ್ಟಲು ಸಾಧ್ಯ ಎನ್ನುವುದನ್ನು ಪ್ರಕೃತಿಯೇ ನಮಗೆ ಕಲಿಸುತ್ತದೆ. ಮನುಷ್ಯನಿಂದಲೂ ಮಾರ್ಗದರ್ಶನ ಸಿಗುತ್ತದೆ. ಆದರೆ ಅದಕ್ಕೆ ಸ್ವಪ್ರಯತ್ನವೂ ಬೇಕು. ಮನುಷ್ಯ ಸುಖದಿಂದ ನಗುತ್ತಿರುವಾಗ ಗೆಳೆಯರು, ಪ್ರೀತಿಸುವವರು ಮಾನಸನ್ಮಾನಗಳು ತಾವಾಗಿಯೇ ಹುಡುಕಿಕೊಂಡು ಬರುತ್ತೇವೆ. ಆದರೆ ಅವನು ಯಾವುದೇ ಸಮಸ್ಯೆಯಿಂದ ತೊಳಲಿ, ಮನಸ್ಸಿಗೆ ನಿರಾಶೆ ಕವಿದಾಗ ಅವನ ಹತ್ತಿರದ ಸಂಬಂಧಿಗಳು ಗೆಳೆಯರು ಯಾರು ಅವನ ಕಷ್ಟಕ್ಕೆ ಬರುವುದಿಲ್ಲ. ಆಗ ಸ್ವಪ್ರಯತ್ನದಿಂದಲೇ ಅವನು ಮೇಲೆ ನಿಲ್ಲಬೇಕಾಗುತ್ತದೆ ಮತ್ತು ಎಲ್ಲಾ ಸಮಸ್ಯೆಯನ್ನು ಅವನೊಬ್ಬನೇ ನಿಬಾಯಿಸಬೇಕಾಗುತ್ತದೆ. ಅವನಿಗೆ ಪ್ರಕೃತಿ ಪಾಠವನ್ನು ಕಲಿಸುತ್ತದೆ.

ಕನ್ನಡದ ಜನಪ್ರಿಯ ಹೆಸರಾಂತ ಕವಿಗಳಲ್ಲಿ ಒಬ್ಬರಾದ ಕೆ.ಎಸ್.ನರಸಿಂಹಸ್ವಾಮಿ–ಯವರು ಪ್ರಮುಖರು. ಇವರು ಪ್ರೇಮಗೀತೆ ಹಾಗೂ ವಾತ್ಸಲ್ಯ ಗೀತೆಗಳನ್ನು ರಚಿಸಿರುವಷ್ಟೇ

ಸರಳವಾದ ಶೈಲಿಯಲ್ಲಿ ಅತ್ಯಂತ ಗಮನಾರ್ಹವಾದ ವಿಚಾರಗಳನ್ನು ವರ್ಣಿಸಬಲ್ಲವರು ಇವರ ಕವಿತೆಗಳಲ್ಲಿ ಕಾವ್ಯಗುಣ ನೂರಕ್ಕೆ ನೂರರಷ್ಟಿದೆ ಎಂದರೆ ತಪ್ಪಾಗಲಾರದು ಇವರ ಕವಿತೆಗಳಲ್ಲಿ ಪ್ರಕೃತಿಯನ್ನು ಪ್ರಧಾನವಸ್ತುವನ್ನಾಗಿ ಬಳಸಿಕೊಂಡಿದ್ದಾರೆ.

**"ದೀಪವೂ ನಿನ್ನದೆ, ಗಾಳಿಯೂ ನಿನ್ನದೆ**
**ಆರದಿರಲಿ ಬೆಳಕು;**
**ಕಡಲೂ ನಿನ್ನದೆ ಹಡಗೂ ನಿನ್ನದೆ**
**ಮುಳುಗದಿರಲಿ ಬದುಕು**
**ನಿನ್ನಂಥ ರಾಜ ಒಳಗಿದ್ದು ದೂರ**
**ಇನ್ನೆಲ್ಲೋ! ನೀನು**
**ರಾಜರಹಿತ ರಾಜ್ಯಂಗ ಶಾಸನ**
**ಪ್ರಾಣಶಕ್ತಿಯೇ ನೀನು"**

**(ಆಯ್ದ ಕವನಗಳು, ಕೆ.ಎಸ್.ಎನ್, ಪು. ೮೫–೯೦)**

ಇವರ ಕವನಗಳು ಮೇಲ್ನೋಟಕ್ಕೆ ಸರಳವೆನಿಸಿದರೂ ಅವುಗಳ ವಸ್ತುವಿನ ಚಿಂತನೆಗಳು ಗುಪ್ತವಾಗಿ ಅಡಗಿಕೊಂಡಿವೆ. ಜಗತ್ತಿನ ಒಳಿತು ಕೆಡುಕುಗಳೆರಡು ಭಗವಂತನ ಸೃಷ್ಟಿ ಎನ್ನುತ್ತೇವೆ. ಪಂಚಭೂತಗಳೆಲ್ಲವೂ ದೇವರ ಶಕ್ತಿಗಳೇ ಎಂದ ಮೇಲೆ, ಕೆಡುಕು ಆಗದಿರಲಿ ಎಂದು ದೇವರಲ್ಲಿ ಮೊರೆಯಿಡಬೇಕಾದದ್ದು ಅನಿವಾರ್ಯ. ಜೀವಸೃಷ್ಟಿ ಭಗವಂತನದು ಎಂದಮೇಲೆ ಅದರ ಒಳಿತು ಕೆಡುಕು ಎಲ್ಲಾವು ಅವನ ಲೀಲೆ ಅದನ್ನೇ ಅದರ ಅಧಿಪತಿ ಇಂತಹ ಗಮನಾರ್ಹವಾದ ವಿಚಾರವನ್ನು ಅತ್ಯಂತ ಸುಲಭಶೈಲಿಯಲ್ಲಿ ಹೇಳುವ ಕಲೆ ಕೆ.ಎಸ್.ಎನ್.ಅವರದು.

ಕಾವ್ಯದ ಧ್ವನಿ ಪೂರ್ಣವಾದಷ್ಟು ಶ್ರೇಷ್ಠವಾಗುತ್ತದೆ ಎಂಬುದು ಲಾಕ್ಷಣಿಕರ ಕಾಲದಿಂದಲೂ ಬಂದ ಅಭಿಪ್ರಾಯ ಈ ನಿಟ್ಟಿನಲ್ಲಿರುವ ವಸ್ತುವನ್ನು ವರ್ಣಿಸುವಾಗ ಕವಿಯ ಮನಸ್ಸಿನಲ್ಲಿ ಬೇರೊಂದು ವಸ್ತುವೇ ಸುಳಿಯುತ್ತದೆ. ಭೂಮಿಯ ಮೇಲಿರುವ ಪ್ರತಿಯೊಂದು ವಸ್ತು ಕೂಡ ಜೀವನದಲ್ಲಿ ಬರುವ ಮಾತ್ಸರ್ಯ ದ್ವೇಷ, ಕ್ರೌರ್ಯಗಳಿಗೆ ಪ್ರತೀಕಗಳಾಗಿ ಬಂದಿವೆ.

ಪ್ರಕೃತಿಯ ಪ್ರತಿಯೊಂದು ವಸ್ತುವನ್ನು ನೋಡಿ ಆನಂದಿಸುವುದು ಬುದ್ಧಿಜೀವಿಯಾದ ಮಾನವನಲ್ಲಿ ಸೌಂದರ್ಯಪ್ರಜ್ಞೆಗೆ ಸಾಕ್ಷಿ ಪ್ರತಿಯೊಂದು ವಸ್ತುವನ್ನು ನೋಡಿ ತನ್ನ ಚಿಂತನೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದಾನೆ ಎಂದ ಮೇಲೆ ಪ್ರಕೃತಿ ದೃಷ್ಟಿಯಿಂದ ಬರೆದ ಈ ಎಲ್ಲಾ ಕವನಗಳು ಪ್ರಕೃತಿಯಲ್ಲಿ ಕಂಡುಬರುವ ಪ್ರತಿಯೊಂದು ವಸ್ತುವಿನ ಮೇಲೆ ಬೀಸುವ ಗಾಳಿಯಿಂದ ಹಿಡಿದು ಹರಿಯುವ ನದಿವರೆಗೂ ತನ್ನದೇ ಶೈಲಿಯಲ್ಲಿ ತನ್ನ ಕಲ್ಪನೆಯನ್ನು ಮೀರಿ ಪ್ರಕೃತಿಯನ್ನು ವರ್ಣಿಸಿದ್ದಾನೆ ಮತ್ತು ವರ್ಣಿಸುತ್ತಿದ್ದಾನೆ ಎಂಬುವುದು ಒಂದು ಹೆಮ್ಮೆಯ ಸಂಗತಿ.

## ಕೊನೆಟಿಪ್ಪಣಿಗಳು

೧. ಡಿ.ಎಲ್.ನರಸಿಂಹಾಚಾರ್, ಪೀಠಿಕೆಗಳು, ಲೇಖನಗಳು, ಪು. ೫೪೧

೨. ಡಾ. ದ್ರಾಕ್ಷಾಯಿಣಿ, ಕುವೆಂಪು ಸಾಹಿತ್ಯದಲ್ಲಿ ಪ್ರಕೃತಿ, ಪು. ೧೮

೩. ಪಂಪಭಾರತ, ಪು. ೨

೪. ಆದಿಪುರಾಣ, ಪು. ೯–೧೧

೫. ಸೂಕ್ತಿಸುಧಾರ್ಣವಂ, ಪು. ೨೩೯–೨೭೭

೬. ಭರತೇಶ ವೈಭವ, ಪು. ೭–೮

೭. ಡಾ. ಬಸವರಾಜ ಸಬರದ, ಸಾಹಿತ್ಯ ಸಂಗತಿ, ಪು. ೭

೮. ಪ್ರಭುಶಂಕರ, ಕನ್ನಡದಲ್ಲಿ ಭಾವಗೀತೆ, ಪು. ೧೯೯

*****

# ಅಧ್ಯಾಯ – ೩

# ಪರಿಸರ ಕಥನಕಾರರ ಬದುಕು ಮತ್ತು ಸಾಧನೆಯ ಪರಿಚಯ

ಆಧುನಿಕ ಕನ್ನಡ ಸಾಹಿತ್ಯ ಎಂದ ತಕ್ಷಣ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗ ಹಾಗೂ ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಕಾಲಘಟ್ಟವನ್ನು ನಾವು ನೋಡುತ್ತೇವೆ. ಈ ಕಾಲದ ಸಾಹಿತ್ಯವು ಒಂದು ಪ್ರಜ್ಞಾಪೂರ್ವಕವಾದ ಹಿನ್ನೆಲೆಯಲ್ಲಿ ಸೃಷ್ಟಿಕೊಂಡಿದೆ. ಇದಕ್ಕೆ ಮೂಲ ಕಾರಣ ಪಾಶ್ಚಾತ್ಯ ಶಿಕ್ಷಣ ಮತ್ತು ಇಂಗ್ಲಿಷ್ ಸಾಹಿತ್ಯದ ಪ್ರಭಾವ. ಅದರ ಪ್ರವೇಶದಿಂದ ಇಲ್ಲಿ ಹೊಸ ಸಾಹಿತ್ಯ ನಿರ್ಮಾಣವಾಯಿತು. ಈ ಯುಗಧರ್ಮಕ್ಕೆ ಅನುಗುಣವಾಗಿ ಕನ್ನಡ ಸಾಹಿತ್ಯದಲ್ಲಿ ಹಲವು ಸಾಹಿತ್ಯ ಚಳವಳಿಗಳು ಕಂಡುಬಂದವು. ಅವುಗಳು ಕ್ರಮವಾಗಿ ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ ಸಾಹಿತ್ಯ, ಇತ್ತೀಚಿನ ದಿನಗಳಲ್ಲಿ ಪರಿಸರ ಕಥನ ಸಾಹಿತ್ಯದ ಬಗ್ಗೆ ಚಿಂತನೆಗಳು ಹೆಚ್ಚಾಗಿ ಕಂಡು–ಬರುತ್ತಿರುವುದು ಗಮನಾರ್ಹ ಸಂಗತಿ.

ಪರಿಸರ ಕಥನ ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿ ವಿಶೇಷವಾದ ನೆಲೆಯನ್ನು ಪಡೆದುಕೊಳ್ಳಲು ಅಥವಾ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪರಿಸರ ಸಾಹಿತ್ಯವು ತನ್ನದೇ ಆದ ಮಹತ್ವದ ಸ್ಥಾನವನ್ನು ಹೊಂದಿದೆ. ೧೯೨೦ರಲ್ಲಿ ಆರಂಭವಾದ ನವೋದಯ ಅಥವಾ ರೊಮ್ಯಾಂಟಿಕ್ ಕಾವ್ಯವನ್ನು ಸುವರ್ಣಯುಗ ಎಂದು ಸ್ಪಷ್ಟವಾಗಿ ಗೋಚರಿಸಿದ್ದು, ಈಗಾಗಲೇ ಚರ್ಚಿಸಿದಂತೆ ಬಿ.ಎಂ.ಶ್ರೀಯವರ ಇಂಗ್ಲಿಷ್ ಗೀತೆಗಳ ಕವನ ಸಂಕಲನದಲ್ಲಿ ರೊಮ್ಯಾಂಟಿಕ್ ಕಾವ್ಯ ಮಾನವ ಮತ್ತು ಪ್ರಕೃತಿ ಸಂಬಂಧದ ಗಾಢತೆಯನ್ನು ವಿಶ್ಲೇಷಿಸುತ್ತದೆ. ಮಾನವನೇ ಅಲ್ಲಿ ಆಸಕ್ತಿಯ ಕೇಂದ್ರಬಿಂದುವಾಗಿದ್ದರೆ, ಅವನ ವ್ಯಕ್ತಿತ್ವದ ಘನತೆಯೇ ಸಾಹಿತ್ಯದ ಮೂಲ ನೆಲೆಯಾಗಿದೆ.

ಆಧುನಿಕ ಕನ್ನಡ ಸಾಹಿತ್ಯದ ಮುಖ್ಯ ನೆಲೆಗಳನ್ನು ಕುರಿತು ಶಾಂತಿನಾಥ ದೇಸಾಯಿ ಅವರ ಮಾತನ್ನು ಇಲ್ಲಿ ಗಮನಿಸಬಹುದು. "ಭಾರತೀಯರ ಸಹಜ ಆತ್ಮಗೌರವ, ಆಶಾವಾದಿ ಆದರ್ಶಗಳು, ಜಾತ್ಯತೀತ ಪ್ರಜಾಪ್ರಭುತ್ವದ ಮೌಲ್ಯಗಳು, ವಿಶ್ವಧರ್ಮ, ವಿಶ್ವಭ್ರಾತೃತ್ವ, ಅಧ್ಯಾತ್ಮ, ಅನುಭಾವಗಳು ಇವೆಲ್ಲ ಸಮ್ಮಿಳನವಾದ ಯುಗದ ಮನೋಧರ್ಮವನ್ನು ಆಧುನಿಕ ಕನ್ನಡ ಸಾಹಿತ್ಯ ಪ್ರತಿಬಿಂಬಿಸುತ್ತದೆ"[೧] ಅದು ಮನುಷ್ಯನನ್ನು ನಿಸರ್ಗವನ್ನೊಳಗೊಂಡ ಸೃಷ್ಟಿಯಲ್ಲಿಟ್ಟು ನೋಡಿತು. ಸೃಷ್ಟಿಯಲ್ಲಿ ಸರ್ವವ್ಯಾಪ್ತಿಯಾದ ಒಂದು ಚೇತನವನ್ನು ಮನುಷ್ಯ ಮತ್ತು ನಿಸರ್ಗಗಳ ನಡುವೆ ಒಂದು ಆಧ್ಯಾತ್ಮಿಕ ಬಾಂಧವ್ಯವನ್ನು ಗುರುತಿಸುತ್ತದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಜೀವ ಪರಿಸರದ ಆಗುಹೋಗುಗಳ ಬಗ್ಗೆ ಹಲವು ಲೇಖಕರು, ಕವಿಗಳು, ಪರಿಸರವಾದಿಗಳು, ಪ್ರಜ್ಞಾವಂತರು ಕಾಳಜಿ ತೋರಿರುವುದನ್ನು

ಕಾಣಬಹುದು. ಅವರಲ್ಲಿ ಪ್ರಮುಖರಾದವರೆಂದರೆ ಕುವೆಂಪು, ಜಿ.ಜಿ.ಎಲ್.ಸ್ವಾಮಿ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ನಾಗೇಶ್ ಹೆಗಡೆ, ಚಂದ್ರಶೇಖರ ನಂಗಲಿ, ಟಿ.ಎಸ್. ವಿವೇಕಾನಂದ ಮುಂತಾದವರು, ಅವರುಗಳ ಸ್ಥೂಲ ಪರಿಚಯ ಹೀಗಿದೆ.[1]

**ರಸಋಷಿ ಕುವೆಂಪು**

ಇಪ್ಪತ್ತನೆಯ ಶತಮಾನದ ಕನ್ನಡ ನವೋದಯ ಕಾವ್ಯದ ಮೇರು ಪ್ರತಿಭೆ. ಕುವೆಂಪು ಅವರ ಸಾಹಿತ್ಯಕ ಬೆಳವಣಿಗೆ, ಸಾಧನೆ ಸಿದ್ಧಿಗಳಿಂದ ಮತ್ತು ಅವರು ಇತರ ಕವಿಗಳ ಮೇಲೆ ಬೀರಿದ ಪ್ರಭಾವದಿಂದ ೨೦ನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ ಕಂಗೊಳಿಸುತ್ತದೆ. ಕಾವ್ಯ, ನಾಟಕ, ಸಣ್ಣಕಥೆ, ಕಾದಂಬರಿ, ಕಥನ, ಕವನ, ಮಹಾಕಾವ್ಯ, ಸಾಹಿತ್ಯ, ವಿಮರ್ಶೆ, ಈ ಒಂದೊಂದು ಪ್ರಕಾರದಲ್ಲೂ ಗಣನೀಯವಾದ ಕೊಡುಗೆಯನ್ನು ಕುವೆಂಪು ನೀಡಿದ್ದಾರೆ.

"ಕುವೆಂಪು" ಎಂಬ ಕಾವ್ಯನಾಮದಿಂದ ಚಿರಪರಿಚಿತವಾದ ಅವರ ಪೂರ್ಣ ಹೆಸರು "ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ". ಇವರು ಜನಿಸಿದ್ದು ದಿನಾಂಕ ೨೯-೧೨-೧೯೦೪ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಹಿರೇಕೂಡಿಗೆಯಲ್ಲಿ ಜನಿಸಿದರು. ಸುತ್ತ ದಟ್ಟವಾದ ಕಾಡು ಮುಗಿಲು ಮುಟ್ಟುತ್ತಿರುವ ಪರ್ವತ ಪಂಕ್ತಿಗಳು, ನಯನ ಮನೋಹರವಾದ ಪ್ರಕೃತಿ ಮಡಿಲಲ್ಲಿ ಬೆಳೆಯುತ್ತಾ ಪ್ರಕೃತಿಯನ್ನೇ ಆರಾಧಿಸುತ್ತಾ ಅವರು ಪ್ರಕೃತಿಗಾಗಿ ನೀಡಿದ ಕೊಡುಗೆ ಅಪಾರ.

ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರೂ, ಪದ್ಮಭೂಷಣರೂ, ರಾಷ್ಟ್ರಕವಿಗಳೂ ಆದ ಕುವೆಂಪುರವರು ಕನ್ನಡ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪಾರ. ಅವರು ಕನ್ನಡ ಸಾಹಿತ್ಯ ಪರಂಪರೆಗೆ ಕುವೆಂಪು ನೀಡಿದ ಕೊಡುಗೆಗಳಲ್ಲಿ ತುಂಬಾ ಪ್ರಮುಖವಾದುದೆಂದರೆ ಮಲೆನಾಡಿನ ಸೊಬಗನ್ನು ವರ್ಣಿಸುವ ಕಥೆ, ಕವನ, ಕಾದಂಬರಿಗಳು, ಅದರಲ್ಲಿ ಅವರು ಕಟ್ಟಿಕೊಡುವ ಪರಿಸರವು ಇಂದಿನ ನಗರಕೇಂದ್ರಿತ ಚಿಂತನೆಗೆ ಹೊಸ ದೃಷ್ಟಿಯನ್ನು ನೀಡುವಂಥದ್ದಾಗಿದೆ.

ಮಲೆನಾಡಿನ ಪ್ರತಿಷ್ಠಿತ ಸಾಮಾಜಿಕ ನೆಲೆಯಿಂದ ಹುಟ್ಟಿಬಂದ ಆ ಮಲೆನಾಡಿನ ಪರ್ವತಾರಣ್ಯ ಚೈತನ್ಯದ ಮೊದಲ ಪ್ರತಿನಿಧಿಯೆಂಬಂತೆ ತೋರುವ ಈ ಕವಿ ತನ್ನ ಅಭಿವ್ಯಕ್ತಿಯನ್ನು ಮೊಟ್ಟ ಮೊದಲಿಗೆ ಕಂಡುಕೊಂಡದ್ದು ಕನ್ನಡದಲ್ಲಿ ಅಲ್ಲ ಇಂಗ್ಲಿಷ್‌ನಲ್ಲಿ ಎನ್ನುವುದು. ಸ್ವಾರಸ್ಯದ ಸಂಗತಿಯಾಗಿದೆ.[2]

ಸ್ವಾತಂತ್ರ್ಯ ಚಳವಳಿ, ನಾಡು-ನುಡಿ, ಕರ್ನಾಟಕ ಏಕೀಕರಣ ಮತ್ತು ಪ್ರಾದೇಶಿಕ ಭಾಷಾ ಶಿಕ್ಷಣದ ಅವಶ್ಯಕತೆಯನ್ನು ಒತ್ತಾಯಿಸುತ್ತಿದ್ದ ಪುಟ್ಟಪ್ಪರವರು ಕನ್ನಡದ ಮೂಲಕವೇ ಭಾರತ

ಮತ್ತು ವಿಶ್ವವನ್ನು ಕಂಡ ಅಪರೂಪದ ಮನುಷ್ಯ. ಅಲ್ಲದೆ ಪ್ರಜಾಪ್ರಭುತ್ವದ ಪ್ರಬಲ ಪ್ರತಿಪಾದಕರಾಗಿದ್ದ ಅವರು ನಮ್ಮ ಸಾಮಾಜಿಕ ಅವ್ಯವಸ್ಥೆಗೆ ಅದರ ಅವಶ್ಯಕತೆಗೆ ಪ್ರಬಲವಾಗಿ ಪ್ರತಿಪಾದಿಸಿದ್ದಾರೆ.

ಕುವೆಂಪು ಅವರ ಕವಿತೆಗಳಲ್ಲಿ ಪ್ರಕೃತಿಯ ಕವನಗಳು ಬಹಳ ಮುಖ್ಯವಾದವು. "ಕಾಡಿನ ಕೊಳಲಿದು ಕಾಡ ಕವಿಯನಾ ನಾಡಿನ ಜನರೂಲಿದಾಲಿಪುದು" ಎಂದು ಅವರು ಆರಂಭದ 'ಕೊಳಲು' ಸಂಕಲನದಲ್ಲೇ ಬಿಂಬಿಸಿಕೊಳ್ಳುತ್ತಾರೆ. ಕುವೆಂಪು ತಮ್ಮನ್ನು 'ಕಾಡುಕವಿ' ಎಂದು ಕರೆದುಕೊಂಡಿರುವುದು. ತಮ್ಮ ಕಾವ್ಯದ ದನಿ. ಕಾಡಿನ ಕೊಳಲದನಿ ಎಂದು ಸೂಚಿಸಿರುವುದು ಅವರ ಪ್ರಕೃತಿ ಪ್ರೀತಿಗೆ ಸಾಕ್ಷಿಯಾಗಿದೆ. ಈ ಕಾಡಿನ ಕವಿ ನಮ್ಮ ನಾಡಿನ ಕವಿಯಾಗಿ, ರಾಷ್ಟ್ರಕವಿ ಎಂಬ ಪ್ರಶಂಸೆಗೆ ಪಾತ್ರರಾದದ್ದು ಸಾಹಿತ್ಯ ಚರಿತ್ರೆಯ ಒಂದು ವಿಶೇಷ ಭಾಗವಾಗಿದೆ.

"ಸರ್ವೋದಯ ಸಮನ್ವಯ, ಪೂರ್ಣದೃಷ್ಟಿ" – ಕುವೆಂಪುರವರು ನೀಡಿದ ಕೊಡುಗೆಗಳು. "ಮನುಜಮತ–ವಿಶ್ವಪಥ" ಅವರು ತೋರಿದ ಹೊಸ ದಾರಿಯಾಗಿದೆ. ಸೂರ್ಯೋದಯ ಚಂದ್ರೋದಯವೆಂದು ಸುಮ್ಮನೆ ನೋಡದೆ ಅದರ ಹಿಂದಿರುವ ಹೃದಯವನ್ನು ಅರಿಯಲು ಪ್ರಯತ್ನಿಸು ಅದೇ ಅಮೃತದಾ ಕಣ್ಣು. ಹೀಗೆ ಪ್ರಕೃತಿಯ ಹಿಂದಿರುವ ಶಿವನೇ ತನ್ನಲ್ಲೂ ಇದ್ದಾನೆ. ತನ್ನ ಕಾವ್ಯ ರಚನೆಯ ಹಿಂದೆ ಅಂದರೆ ಬರೆಯಲು ಪ್ರೇರಣೆ ನೀಡಿರುವುದು ಅವನೇ. ಆ ಶಿವ ತನಗೆ ಶಕ್ತಿಯನ್ನು ಚೈತನ್ಯವನ್ನು ನೀಡದೆ ಹೋದರೆ ಕವಿಯೂ ಕುರುಡನಾಗುತ್ತಾನೆ. ಆದ್ದರಿಂದ ಪ್ರಕೃತಿಯಿಂದಿರುವ ಶಿವ ಕಾವ್ಯದ ಹಿಂದಿರುವ ಶಿವ ಒಬ್ಬನೇ ಆಗಿದ್ದಾನೆ ಎಂಬುದು ಕವಿಯ ನಿಲುವಾಗಿದೆ. ಅದಕ್ಕಾಗಿ ಉದಯದಲ್ಲಿ ಹೃದಯವನ್ನೂ ಕಾವ್ಯದಲ್ಲಿ ಶಿವನನ್ನೂ ಕಾಣಬೇಕು. ಅವನ್ನೂ ಕಾಣದ ಕಣ್ಣು ನಿಷ್ಪ್ರಯೋಜಕವೆಂಬುದು ಕುವೆಂಪುರವರ ಅನಿಸಿಕೆ.[೩]

ಕುವೆಂಪುರವರಿಗೆ "ಪ್ರಕೃತಿಯಾರಾಧನೆಯೇ ಪರಮನಾರಾಧನೆಯಾಗಿ ಪ್ರಕೃತಿ–ಯೊಲ್ಮೆಯ ಮುಕ್ತಿಯಾನಂದ ಸಾಧನೆಯಾಗಿ ಕಂಡಿದೆ. ಕಣ್ ತೆರೆದು ಪ್ರಕೃತಿ ಸೌಂದರ್ಯವಂ ಭಾವನೋಜ್ವಲವಾಗಿ ನೋಡದಿಹ ಬಾಳೊಂದು ಬಾಳಲ್ಲ". ಕುವೆಂಪು ಅವರಿಗೆ ಪ್ರಕೃತಿ ಕೇವಲ ಜಡವಲ್ಲ. ಸೌಂದರ್ಯ ಸಾಕ್ಷಾತ್ಕಾರದ ಮೂಲಕ ಪರಮಾತ್ಮ ಸಾಕ್ಷಾತ್ಕಾರಕ್ಕೆ ಕರೆದೊಯ್ಯುವ ಸಾಧನ ನಿಸರ್ಗವನ್ನು ನೋಡ ನೋಡುತ್ತ ಅವರು ಅದರಲ್ಲೇ ತಾದಾತ್ಮ್ಯ ಹೊಂದುತ್ತಾರೆ.

'ಆನಂದಮಯ ಈ ಜಗಹೃದಯ' ಕವನದಲ್ಲಿ ಪ್ರಕೃತಿಯನ್ನು ದೇವರಂತೆ ಕಂಡು ಸೂರ್ಯೋದಯ, ಚಂದ್ರೋದಯ ದೇವರ ದಯವಾಗಿ ಕಂಡಿದೆ. ಅವರಿಗೆ ಇಡೀ ಜಗವೇ

ಆನಂದಮಯ. ಇಂದ್ರಿಯಾತೀತವಾದ ರಸಾನುಭೂತಿಯನ್ನು ಅವರು ಪ್ರಕೃತಿಯ ಸಾನಿಧ್ಯದಲ್ಲಿ ಪಡೆಯುತ್ತಾರೆ. ಪ್ರಕೃತಿಯ ಸೌಂದರ್ಯಾನುಭೂತಿಯ ಮುಂದೆ ಲೌಕಿಕ ಸುಖ ನಶ್ವರ ಎಂಬುದು ಕವಿಯ ಆಶಯ. ಸೌಂದರ್ಯಾನುಭೂತಿ ಕೂಡ ಧರ್ಮದಾರಿಯೇ. ಅದರಿಂದಲೂ ಸತ್ಯದ ಸಾಕ್ಷಾತ್ಕಾರ ಸಾಧ್ಯ. ಇದರಿಂದ ಮನಸ್ಸು ಆಲೋಚನೆ ಅಂತರ್ಮುಖವಾಗುತ್ತವೆ.

ಕುವೆಂಪುರವರ ಪ್ರಕೃತಿ ಕವನಗಳಲ್ಲಿ ಜನರಿರುವುದು ತೀರಾ ವಿರಳ ಪುಟ್ಟಪ್ಪರವರು ಸ್ನೇಹಿತರಿಲ್ಲದೆ ಏಕಾಂಗಿಯಾಗಿ ತೊಳಲುವಾಗ ಜೊತೆಗೂಡಿ ಬರುವ ಪ್ರಕೃತಿ ಸಂತೋಷ ನೀಡುತ್ತದೆ. ಕುವೆಂಪುರವರನ್ನು "ಕನ್ನಡದ ವರ್ಡ್ಸ್‌ವರ್ತ್" ಎಂದು ಕರೆಯಲಾಗುತ್ತದೆ. ಸ್ವತಃ ಕುವೆಂಪು ಅವರೇ ವರ್ಡ್ಸ್‌ವರ್ತ್‌ನ ಭಾವಗೀತೆಗಳ ಗಾಢ ಪ್ರಭಾವಕ್ಕೆ ಒಳಗಾಗಿರುವುದನ್ನು ಕಾಣಬಹುದು.

**ಬಿ.ಜಿ.ಎಲ್ ಸ್ವಾಮಿ:** ಬಿ.ಜಿ.ಎಲ್ ಸ್ವಾಮಿ (ಬೆಂಗಳೂರು ಗುಂಡಪ್ಪ ಲಕ್ಷ್ಮೀನಾರಾಯಣ ಸ್ವಾಮಿ) ಕರ್ನಾಟಕದ ಹಿರಿಯ ವಿಜ್ಞಾನಿ ಮತ್ತು ಸಾಹಿತಿ. ಹಾಗೂ ಇವರು ಹಿರಿಯ ವಿದ್ವಾಂಸರು ಚಿಂತನಶೀಲ ಬರಹಗಾರ. ಬಿ.ಜಿ.ಎಲ್. ಸ್ವಾಮಿಯವರು ಕನ್ನಡದ ಪ್ರಸಿದ್ಧ ಸಾಹಿತಿ ಡಿ.ವಿ.ಗುಂಡಪ್ಪನವರ ಏಕಮಾತ್ರ ಪುತ್ರರು. ಮನೆಯಲ್ಲಿ ಸಾಹಿತ್ಯ, ಸಂಗೀತ, ಚಿಂತನಶೀಲತೆ, ಗಾಳಿಯಲ್ಲೇ ಬೆರೆತುಹೋಗಿದ್ದವು. ಇವರು ವಿದ್ಯಾರ್ಥಿಯಾಗಿದ್ದಾಗಲೇ ಕರ್ನಾಟಕ ಸಂಘದ ಕಾರ್ಯದರ್ಶಿಯಾಗಿ ಕೆಲಸ ಮಾಡಿದರು. ೧೯೩೯ರಲ್ಲಿ ಸಸ್ಯಶಾಸ್ತ್ರವನ್ನು ಅಧ್ಯಯನ ಮಾಡಿ ಬಿಎಸ್.ಸಿ (ಆನರ್ಸ್) ಪರೀಕ್ಷೆಯಲ್ಲಿ ಮೊದಲ ತರಗತಿಯಲ್ಲಿ ಉತ್ತೀರ್ಣರಾಗಿದ್ದರು. ಬಿಜಿಎಲ್ ಸ್ವಾಮಿಯವರು ಮನೆಯನ್ನೇ ಸಂಶೋಧನಾಲಯವನ್ನಾಗಿ ಮಾಡಿಕೊಂಡು ಸಾಧಾರಣವಾದ ಉಪಕರಣಗಳನ್ನು ಬಳಸಿಕೊಂಡು ಸಂಶೋಧನಾ ಲೇಖನಗಳನ್ನು ಬರೆದಿದ್ದಾರೆ.[೪]

೧೯೪೭ರಲ್ಲಿ ಅವರಿಗೆ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರತಿಷ್ಠಿತ ಡಿ.ಎಸ್ಸಿ ಪದವಿ ಬಂತು. ಅದೇ ವರ್ಷ ಅಮೇರಿಕಾದಲ್ಲಿ ವಿಶ್ವವಿಖ್ಯಾತ ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಜಗತ್ಪ್ರಸಿದ್ಧ ಸಸ್ಯವಿಜ್ಞಾನಿ ಪ್ರೊಫೆಸರ್ ಇರ್ವಿಂಗ್ ಬೈಲಿಯ ಹತ್ತಿರ ಸಸ್ಯಶಾಸ್ತ್ರ ಅಧ್ಯಯನಕ್ಕೆ ಹೋಗಲು ಭಾರತ ಸರ್ಕಾರದ ನೆರವು ದೊರೆಯಿತು. ಹತ್ತು ತಿಂಗಳ ಅಧ್ಯಯನದ ನಂತರ ಅವರು ಭಾರತಕ್ಕೆ ಹಿಂದಿರುಗಿದಾಗ ಬೈಲಿ, "ನನ್ನ ನಲವತ್ತು ವರ್ಷಗಳ ಅನುಭವದಲ್ಲಿ ಪೂರ್ವದೇಶಗಳಿಂದ ಬಂದ ವಿದ್ಯಾರ್ಥಿಗಳಲ್ಲಿ ಅತ್ಯಂತ ಸಮರ್ಥರು ಬಿ.ಜೆ.ಲ್ ಸ್ವಾಮಿ" ಎಂದು ಬರೆದರು. ಆವವರೆಗೆ ಆತ ಯಾರ ಹೆಸರನ್ನು ತನ್ನ ಸಂಶೋಧನೆಗಳೊಂದಿಗೆ ಸೇರಿಸಿರಲಿಲ್ಲ. ಆದರೆ ಅವರು ಸ್ವಾಮಿಯ ಹೆಸರನ್ನು ಸೇರಿಸಿದರು. ಇವರು ಮದ್ರಾಸಿನ

ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿಯೂ, ಪ್ರಾಂಶುಪಾಲರಾಗಿಯೂ ಸೇವೆ ಸಲ್ಲಿಸಿದರು. ಸಸ್ಯಶಾಸ್ತ್ರದಲ್ಲಿ ಸಂಶೋಧನೆಯನ್ನು ಮುಂದುವರೆಸಿ ಅಮೇರಿಕ, ರಷ್ಯಾ, ಮೊದಲಾದ ದೇಶಗಳಲ್ಲೂ ಕೀರ್ತಿ ಪಡೆದಿದ್ದಾರೆ. ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಿ ಆದರ್ಶ ಪ್ರಾಧ್ಯಾಪಕ ಸಂಶೋಧಕ ಎನ್ನಿಸಿಕೊಂಡಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ಅಂತರಾಷ್ಟ್ರೀಯ ಸಮ್ಮೇಳನಗಳಲ್ಲಿ ವಿಜ್ಞಾನದ ಸಂಶೋಧನೆಗಳನ್ನು ಕುರಿತು ಅತ್ಯಂತ ಪ್ರೌಢವಾದ ಪ್ರಬಂಧಗಳನ್ನು ಮಂಡಿಸಿದ್ದಾರೆ.

ಬಿ.ಜಿ.ಎಲ್.ಸ್ವಾಮಿಯವರು ಮೂಲತಃ ಸಸ್ಯಶಾಸ್ತ್ರ ವಿಷಯದ ಪ್ರಾಧ್ಯಾಪಕರು. ಇವರ ಹಲವಾರು ಕೃತಿಗಳು ಜನಪ್ರಿಯವಾಗಿವೆ. ಇವರು ಸಸ್ಯಶಾಸ್ತ್ರದಲ್ಲಿ ಹೆಚ್ಚು ಅಧ್ಯಯನ ಮಾಡಿ. ಇದುವರೆಗೂ ನಮಗೆ ಗೊತ್ತಿಲ್ಲದ ಅಥವಾ ಹೆಚ್ಚು ಪ್ರಚಲಿತದಲ್ಲಿಲ್ಲದ ಸಸ್ಯ ಪ್ರಬೇಧಗಳನ್ನು ಗುರುತಿಸಿ. ಅದರಿಂದ ಮನುಷ್ಯನಿಗಾಗುವ ಪ್ರಯೋಜನಗಳನ್ನು ತಿಳಿಸಿದ್ದಾರೆ. ಇವರ ಒಟ್ಟು ಬರವಣಿಗೆಯಲ್ಲಿ ವಿಜ್ಞಾನ ವಿಷಯವನ್ನು ಒಳಗೊಂಡಿರುವ ಎರಡು ಕೃತಿಗಳನ್ನು ಉಲ್ಲೇಖಿಸಬಹುದು. 'ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾ' ಮತ್ತು 'ಹಸುರು ಹೊನ್ನು' ಮೊದಲ ಕೃತಿಯಲ್ಲಿ ನಾವು ಭಾರತದಲ್ಲಿ ಈಗ ಬಳಕೆ ಮಾಡುತ್ತಿರುವ ತರಕಾರಿಗಳು ಹೇಗೆ ೨೦೦-೩೦೦ ವರ್ಷಗಳ ಹಿಂದೆ ದಕ್ಷಿಣ ಅಮೇರಿಕಾದಿಂದ ಭಾರತಕ್ಕೆ ಬಂದವು ಎಂಬ ವಿಷಯವನ್ನು ಬಹಳ ಸ್ವಾರಸ್ಯಕರವಾಗಿ ಕಟ್ಟಿಕೊಡುತ್ತಾರೆ. ಹಾಗೂ ನಮ್ಮ ಬಳಕೆಯಲ್ಲಿಲ್ಲದ ಎಷ್ಟೋ ತರಕಾರಿ ಪ್ರಭೇದಗಳನ್ನು ಉಲ್ಲೇಖಿಸುತ್ತಾರೆ. 'ಹಸುರು ಹೊನ್ನು' ಎಂಬ ಕೃತಿಯಲ್ಲಿ ಇಲ್ಲಿಯವರೆಗೂ ನಮ್ಮ ಅರಿವಿಗೆ ಬಾರದ ಮಾನವ ಉಪಯೋಗಿ ಸಸ್ಯ ಪ್ರಭೇದಗಳ ಬಗ್ಗೆ ಚರ್ಚಿಸುತ್ತಾರೆ. ಇದೊಂದು ಪ್ರವಾಸಕಥನ ಮಾದರಿಯ ಕೃತಿಯಾಗಿದ್ದು ಬಿ.ಜಿ.ಎಲ್.ಸ್ವಾಮಿ ಅವರು ಅಧ್ಯಾಪನ ವೃತ್ತಿಯಲ್ಲಿರುವಾಗ ತಮ್ಮ ವಿದ್ಯಾರ್ಥಿಗಳೊಂದಿಗೆ ಅಧ್ಯಯನ ಪ್ರವಾಶ ಕೈಗೊಂಡ ಸಂದರ್ಭದಲ್ಲಿ ರಚಿಸಿದ ಕೃತಿಯಾಗಿದೆ. ಇವರ ಕೃತಿಗಳಲ್ಲಿ ವಿಜ್ಞಾನದ ವಸ್ತು ಪ್ರಧಾನವಾಗಿದ್ದರೂ ಹಾಸ್ಯ ಮತ್ತು ವಿಡಂಬನೆ ಜೊತೆಗೆ ಸಾಹಿತ್ಯದ ಸ್ಪರ್ಶವಿದ್ದುದರಿಂದ ವಿಚಾರವನ್ನು ಬಹಳ ಸರಳವಾಗಿ ಗ್ರಹಿಸಲು ಸಾಧ್ಯವಾಗುತ್ತದೆ. ಇವರ 'ಹಸುರು ಹೊನ್ನು' ಕೃತಿಯ ಮತ್ತೊಂದು ಹೆಗ್ಗಳಿಕೆಯೆಂದರೆ, ಈ ಕೃತಿಗೆ 'ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ' ದೊರಕಿದ್ದು. ಬಿ.ಜಿ.ಎಲ್.ಸ್ವಾಮಿಯವರು ಹಾಸ್ಯ ವಿಡಂಬನೆ, ವೈಚಾರಿಕತೆ ಕುರಿತ ಹಲವಾರು ಇತರೆ ಕೃತಿಗಳನ್ನು ರಚಿಸಿದ್ದರೂ ಅವರು ಬರೆದ ವಿಜ್ಞಾನ ಸಾಹಿತ್ಯ ಕೃತಿಗೆ ಈ ಪ್ರಶಸ್ತಿ ದೊರಕಿದ್ದು ಒಂದು ಹೆಮ್ಮೆಯ ಸಂಗತಿ.[೫]

**ಕೆ.ವಿ.ಪೂರ್ಣಚಂದ್ರ ತೇಜಸ್ವಿ:** ಕೆ.ವಿ.ಪೂರ್ಣಚಂದ್ರ ತೇಜಸ್ವಿಯವರು ೮-೯-೧೯೩೮ ರಂದು ಸಹ್ಯಾದ್ರಿ ಪರ್ವತಗಳ ಸಾಲಿನ ಮಲೆನಾಡಿನ ಶಿವಮೊಗ್ಗ ಜಿಲ್ಲೆಯ ಕುಪ್ಪಳ್ಳಿಯಲ್ಲಿ ಜನಿಸಿದರು.

ಇವರ ತಂದೆ ಕೆ.ವಿ.ಪುಟ್ಟಪ್ಪ ತಾಯಿ ಹೇಮಾವತಿ, ತಮ್ಮ ಇಟರ್ ಮೀಡಿಯಟ್ ವಿದ್ಯಾಭ್ಯಾಸವನ್ನು ತಮ್ಮ ತವರು ಜಿಲ್ಲೆಯಾದ ಶಿವಮೊಗ್ಗದಲ್ಲಿ ಮುಗಿಸಿ ಮಿಕ್ಕೆಲ್ಲಾ ವಿದ್ಯಾಭ್ಯಾಸವನ್ನು ಮೈಸೂರಿನಲ್ಲಿ ಮುಗಿಸಿದರು. ತೇಜಸ್ವಿಯವರು ಮೊದಲಿನಿಂದಲೂ ಸ್ವತಂತ್ರ ಪ್ರವೃತ್ತಿಯುಳ್ಳವರು. ವಿದ್ಯಾಭ್ಯಾಸ ಮುಗಿಯುತ್ತಿದ್ದಂತೆಯೇ ತಮ್ಮ ತವರು ಜಿಲ್ಲೆಯ ಕಡೆ ಮುಖಮಾಡಿದರು. ಪರಿಸರದಲ್ಲಿ ಆಸಕ್ತಿ ಬೆಳಸಿಕೊಂಡ ಅವರು ಕೃಷಿ ಕ್ಷೇತ್ರದಲ್ಲಿ ನಿರಂತರವಾಗಿ ತಮ್ಮನ್ನು ತಾವು ತೋಡಗಿಸಿಕೊಂಡರು.[೬]

ವಿದ್ಯಾರ್ಥಿಯಾಗಿದ್ದಾಗಲೇ 'ಲಿಂಗಬಂದ' ಎಂಬ ಅತ್ಯುತ್ತಮ ಸಣ್ಣ ಕಥೆಯೊಂದನ್ನು ಬರೆಯುವುದರ ಮೂಲಕ ಸಾರಸ್ವತಲೋಕ ಪ್ರವೇಶಿಸಿದ ತೇಜಸ್ವಿಯವರು ಅಂದಿನಿಂದಲೂ ಪ್ರತಿ ಬರವಣಿಗೆಯಲ್ಲೂ ವೈವಿಧ್ಯಮವಾಗಿ ಹಂತ ಹಂತವಾಗಿ ಬೆಳೆಯುತ್ತಲೇ ಬಂದರು. ತೇಜಸ್ವಿಯವರು ನವೋದಯ, ನವ್ಯ, ಹಾಗೂ ನವ್ಯೋತ್ತರ ಘಟ್ಟಗಳಲ್ಲಿ ಸಾಹಿತ್ಯ ಕೃಷಿ ಮಾಡಿದರು. ನವ್ಯ ಸಾಹಿತ್ಯ ಉತ್ಕರ್ಷ ಸ್ಥಿತಿಯಲ್ಲಿದ್ದ ಕಾಲದಿಂದ ಬಂಡಾಯದ ಕಾಲಾವಧಿಯಲ್ಲಿ ಔದ್ಯಮಿಕ ಆವಿಷ್ಕಾರ ಪ್ರವೃತ್ತಿಗಳ ಆಸ್ಫೋಟನೆಯ ಹಿನ್ನೆಲೆಯಲ್ಲಿ ಸಮಾಜದ ಮೌಲ್ಯಗಳು ನಾಶವಾಗುತ್ತಿರುವ ಸಂದರ್ಭದಲ್ಲಿ ಅನನ್ಯ ಸಾಹಿತ್ಯ ಕಲೆಗಾರರಾಗಿ ಬೆಳೆದರು.

ತೇಜಸ್ವಿಯವರು ಬರವಣಿಗೆಗಳು ಯಾವುದೇ ಒಂದೇ ವಿಷಯಕ್ಕೆ ಸೀಮಿತವಾಗಿರದೇ "ಆನೆಗೆ ತಾ ನಡೆದುದೇ ಮಾರ್ಗ' ಎಂಬಂತೆ ಇತಿಹಾಸ ನಿರ್ಮಿಸಿದವು. ಅವರೊಬ್ಬರು ನಿಜವಾದ ಅಪ್ರತಿಮ ಸೃಜನಶೀಲ ಸಾಹಿತಿಯಾಗಿದ್ದು ಅವರ ಪ್ರತಿಯೊಂದು ಬರವಣಿಗೆಯಲ್ಲೂ ಪರಿಸರದ ಕಾಳಜಿ ಹಾಗೂ ಸಮಾಜಮುಖಿ ನಿಲುವುಗಳು ಪ್ರಜ್ವಲಿಸುತ್ತಿರುತ್ತವೆ. ಇವರು ಕತೆ ಕಾದಂಬರಿ ಅಷ್ಟೇ ಅಲ್ಲದೇ 'ಅಲೆಮಾರಿಯ ಅಂಡಮಾನ್ ಮತ್ತು 'ಮಹಾನದಿ ನೈಲ್' ಎಂಬ ಅಪರೂಪದ ಪ್ರವಾಸ ಕಥನವನ್ನು ರಚಿಸಿದ್ದಾರೆ. ಹೀಗೆ ಹಲವಾರು ಕೃತಿಗಳನ್ನು ರಚಿಸಿ ಕನ್ನಡದಲ್ಲಿ ವೈಜ್ಞಾನಿಕ ಸಾಹಿತ್ಯವಿಲ್ಲ ಎಂಬ ಕೊರಗನ್ನು ತುಂಬಿದ್ದಾರೆ. ಹಾಗೆಯೇ 'ಮಿಲಿನಿಯಂ ಸರಣಿ' ಮಾಲಿಕೆಯಲ್ಲಿ ಹತ್ತಾರು ವೈವಿಧ್ಯಮಯ ವಿಷಯಗಳಿಗೆ ಸಂಬಂಧಿಸಿದಂತೆ ಹದಿನಾರು ಅಪರೂಪದ ಕೃತಿಗಳನ್ನು ರಚಿಸುವ ಮೂಲಕ ಒಂದು ಅದ್ಭುತ ಪರಾಕ್ರಮವನ್ನು ಸಾಧಿಸಿದ್ದಾರೆ.[೭]

ತೇಜಸ್ವಿಯವರು ಒಬ್ಬ ಶ್ರೇಷ್ಠ ಸಾಹಿತಿಯಾಗಿರುವುದರ ಜೊತೆಗೆ ಒಬ್ಬ ಯಶಸ್ವಿ ಛಾಯಾಗ್ರಾಹಕರು ಆಗಿರುವುದು ಹೆಮ್ಮೆಯ ಸಂಗತಿ. ಮಲೆನಾಡಿನ ಪ್ರಕೃತಿ ರಮ್ಯತೆಯನ್ನು, ಪ್ರಾಣಿ–ಪಕ್ಷಿಗಳ ಜೀವಸಂಕುಲವನ್ನು ಬದುಕಿನ ಹತ್ತು ಹಲವು ವಿಸ್ಮಯಗಳನ್ನು ಅತ್ಯಂತ ಸೂಕ್ಷ್ಮವಾಗಿ, ಸೊಗಸಾಗಿ, ವೈವಿಧ್ಯಮವಾಗಿ ಸೆರೆ ಹಿಡಿಯುವ ಮೂಲಕ ಅಲ್ಲಿನ ರಮಣತೆಯನ್ನು ಎಲ್ಲರ ಮುಂದೆ ತೆರೆದಿಡುವ ಮೂಲಕ ತೇಜಸ್ವಿಯವರು ಒಬ್ಬ ಶ್ರೇಷ್ಠ

ಚಿಂತಕರಾಗಿ, ಸಾಹಿತಿಯಾಗಿ, ಛಾಯಾಗ್ರಾಹಕರಾಗಿ ನಾಡು–ನುಡಿಯ ಏಳಿಗೆಗಾಗಿ ದುಡಿದಿದ್ದಾರೆ. ಅವರ ಈ ಸೇವೆಗಾಗಿ ಹಲವು ಹತ್ತು ಪ್ರಶಸ್ತಿ ಪುರಸ್ಕಾರಗಳು ಅವರಿದ್ದಲ್ಲಿಗೇ ಅವರನ್ನರಸಿ ಬಂದವು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ವೈವಿಧ್ಯಪೂರ್ಣ ಸಾಹಿತ್ಯವನ್ನು ತೇಜಸ್ವಿಯವರು ರಚಿಸಿದ್ದಾರೆ. ಕಥೆ, ಕಾದಂಬರಿಗಳಷ್ಟಕ್ಕೆ ಸೀಮಿತವಾಗಿರದೆ ವೈಜ್ಞಾನಿಕ ಬರೆವಣಿಗೆಯನ್ನು ಕೂಡ ಮಾಡಿದ್ದಾರೆ. ಅವರ 'ಕರ್ವಾಲೋ' ಒಂದು ವೈಜ್ಞಾನಿಕ ಕಾದಂಬರಿ ಎಂದೇ ಹೇಳಬಹುದು. 'ಅಲೆಮಾರಿ, ಅಂಡಮಾನ್ ಮತ್ತು ಮಹಾನದಿ ನೈಲ್' ಪ್ರವಾಸ ಕಥನ. 'ಪರಿಸರದ ಕಥೆ' ಒಂದು ಕಥನಾತ್ಮಕ ಪ್ರಬಂಧವೆಂದೇ ಪರಿಗಣಿಸಬಹುದಾಗಿದೆ. ಪ್ರಕೃತಿಯ ವಿಸ್ಮಯ ಪ್ರಾಣಿ–ಪಕ್ಷಿಗಳು ಇವುಗಳ ಬಗ್ಗೆ ಅವರು ಬರೆದಿದ್ದಾರೆ. ತಮ್ಮ ತಂದೆ ಕುವೆಂಪು ಕುರಿತಂತೆ 'ಅಣ್ಣನ ನೆನಪು' ಎಂಬ ವಿಶಿಷ್ಟ ಕೃತಿ ರಚಿಸಿದ್ದಾರೆ. ಅವರ ತಂದೆ ಮತ್ತು ಡಾ.ಶಿವರಾಮು ಕಾರಂತರಂತೆ ತೇಜಸ್ವಿ ಪ್ರೀತಿಸಿದ್ದು ಪ್ರಕೃತಿಯನ್ನು.[೮]

ತೇಜಸ್ವಿಯವರ ಕಥೆ ಕಾದಂಬರಿಗಳಲ್ಲಿ ಮನುಷ್ಯ, ಪ್ರಕೃತಿ, ಮನುಷ್ಯ, ಸಮಾಜ, ಮನುಷ್ಯ–ಮನುಷ್ಯರ ಸಂಬಂಧಗಳ ಸಂಕೀರ್ಣತೆಯಲ್ಲಿ ಅವುಗಳನ್ನು ಕೇವಲ ಬೌದ್ಧಿಕವಾಗಿ ಅರ್ಥೈಸಿಕೊಳ್ಳಲಾಗದ ಅನಿವಾರ್ಯತೆಯಲ್ಲಿ ಬುದ್ಧಿಯನ್ನು ಮೀರಿದ ನಿಗೂಢತೆಯಲ್ಲಿ ಬದುಕು ನಮ್ಮೆಲ್ಲ ವಿಶ್ಲೇಷಣೆಗಳನ್ನು ಮೀರಿ ನಿಲ್ಲುತ್ತದೆ. ಬದುಕು ಕೇವಲ ವೈಯಕ್ತಿಕ ಅಸ್ಥಿತ್ವಗಳ ಮೊತ್ತವಷ್ಟೇ ಆಗಿಲ್ಲದಿರುವುದರಿಂದ ಇವುಗಳ ಪರಸ್ಪರ ಸಂಬಂಧ ಘರ್ಷಣೆಗಳು ತೇಜಸ್ವಿಯವರ ಶೋಧನೆಯ ಪ್ರಾಥಮಿಕ ಆಸಕ್ತಿಯಾಗಿ ಮೂಡಿಬರುತ್ತದೆ. ಅವರ ಕತೆ, ಕಾದಂಬರಿಗಳಲ್ಲಿ ಬರುವ ವಿವಿಧ ಪಾತ್ರ ಮತ್ತು ಘಟನೆಗಳು, ಪರಿಸ್ಥಿತಿಗಳು ತಮ್ಮಷ್ಟಕ್ಕೆ ತಾವು ನಿಜವಾಗುವುದರ ಜೊತೆಗೆ ಪರಸ್ಪರ ಒಂದಕ್ಕೊಂದು ಪೂರಕವಾದ ಸಂಬಂಧವಾಗಿರುತ್ತವೆ.

ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರು ಪರಿಸರ ಮತ್ತು ಜೀವ ಸಂಕುಲದ ಬಗ್ಗೆ ಅಪಾರ ಕಾಳಜಿಯನ್ನು ಹೊಂದಿದವರು. ಮನುಷ್ಯನ ಅಭಿವೃದ್ಧಿಯ ಅಮಲಿನಲ್ಲಿ ಅಪಾರವಾದ ಕಾಡಿನ ಸಂಪತ್ತನ್ನು ನಾಶಪಡಿಸುತ್ತಿರುವುದರ ಬಗ್ಗೆ ಆತಂಕಪಡುತ್ತಾ. ಇದರಿಂದ ಸಾವಿರಾರು ಕೋಟಿ ವರ್ಷಗಳಿಂದ ನಿಯಮಬದ್ಧವಾಗಿ ಚಲಿಸುತ್ತಿರುವ 'ಜೀವ ಸರಪಳಿ' ಕೊಂಡಿ ಹೇಗೆ ಹಳಿ ತಪ್ಪುತ್ತಿದೆ ಎಂದು ತಮ್ಮ 'ಪರಿಸರದ ಕಥೆ' ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಜಾಗತಿಕ ವಿಜ್ಞಾನದ ಹಲವು ರೋಚಕ ಸಂಗತಿಗಳನ್ನು ತಮ್ಮ 'ವಿಸ್ಮಯ' ಕೃತಿ ಸರಣಿಯಲ್ಲಿ ಬಹಳ ಆಕರ್ಷಕವಾಗಿ ಚಿತ್ರಿಸಿದ್ದಾರೆ. ಇವರ ಹಲವಾರು ಕಥೆ ಕಾದಂಬರಿಗಳಲ್ಲಿ ಅತಿ ಹೆಚ್ಚು ಪ್ರಾಣಿ–ಪಕ್ಷಿ ಮತ್ತು ಪರಿಸರ ಕುರಿತು ವಿಚಾರಗಳನ್ನು ಚರ್ಚಿಸಿರುವುದು ಗಮನಿಸಬಹುದು.

**ನಾಗೇಶ್ ಹೆಗಡೆ :** ನಾಗೇಶ್ ಹೆಗಡೆ ಉತ್ತರಕನ್ನಡ ಜಿಲ್ಲೆಯ 'ಭಕ್ಕಮನೆ' ಊರಿನವರು, ಶಿರಸಿಯಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ. ಕಲ್ಕತ್ತಾ ವಿಶ್ವವಿದ್ಯಾನಿಲಯದಿಂದ 'ಭೂ ವಿಜ್ಞಾನ' ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದರು. ನಂತರ ದೆಹಲಿಯ ಜವಹರ್ ಲಾಲ್ ನೆಹರು ವಿಶ್ವವಿದ್ಯಾನಿಲಯದಿಂದ 'ಪರಿಸರ ವಿಜ್ಞಾನ'ದಲ್ಲಿ ಎಂಫಿಲ್ ಪದವಿಯನ್ನು ಪಡೆದು, ಕೆಲ ಕಾಲ ನೈನಿತಾಲ್‌ನ 'ಕುಮಾವೊ' ವಿಶ್ವವಿದ್ಯಾನಿಲಯದಲ್ಲಿ ಸಹಾಯಕ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿದರು. ನಂತರ 'ಪ್ರಜಾವಾಣಿ' ಪತ್ರಿಕೆಯು ನಾಗೇಶ್ ಹೆಗಡೆಯವರನ್ನು 'Science Feature writer' ಆಗಿ ನೇಮಕ ಮಾಡಿಕೊಂಡಿತು (ಹೀಗೆ ವಿಜ್ಞಾನದ ಅಂಕಣ ಅಥವಾ ವರದಿಗಾಗಿಯೇ ಒಬ್ಬರನ್ನು ನೇಮಕಮಾಡಿಕೊಂಡದ್ದು ಭಾರತದ ಪತ್ರಿಕಾ ಮಾದ್ಯಮದ ಇತಿಹಾಸದಲ್ಲಿ ಮೊದಲು ಇರಬಹುದು).[೯]

ಪ್ರಜಾವಾಣಿ ಪತ್ರಿಕೆಯಲ್ಲಿ ವರದಿಗಾರರಾಗಿ ಅಂಕಣ ಬರಹಗಾರರಾಗಿ ಕೆಲಸ ಮಾಡಿದ ಇವರು 'ವಿಜ್ಞಾನ ವಿಶೇಷ' ಎಂಬ ತಮ್ಮ ಅಂಕಣದಿಂದ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಒಬ್ಬ ಸಾಮಾನ್ಯ ಅಕ್ಷರಸ್ಥ ಕೂಡ ಅರ್ಥ ಮಾಡಿಕೊಳ್ಳುವ ರೀತಿಯಲ್ಲಿ ಸರಳವಾಗಿ, ವಿವರಣಾತ್ಮಕವಾಗಿ, ಆಕರ್ಷಕ ಸಂಕೇತಿಗಳ ಮೂಲಕ ಗಮನಾರ್ಹವಾದ ವಿಚಾರಗಳನ್ನು ತುಂಬ ಪರಿಣಾಮಕಾರಿಯಾಗಿ ನಿರೂಪಿಸುವುದರ ಮುಖಾಂತರ ಹೆಚ್ಚು ಜನರನ್ನು ತಲುಪಿಸಿದ್ದಾರೆ. ಇವರು ಕಬ್ಬಿಣದ ಅದಿರಿನ ಗಣಿಗಾರಿಕೆ ಮತ್ತು ಅದರ ರಫ್ತುವಿನ ಕುರಿತ ಸರ್ಕಾರದ ಬೇಜವಾಬ್ದಾರಿತನದ ಪ್ರಸ್ತಾಪಿಸಿ ಬರೆದ ಲೇಖನ 'ತುರ್ತು ಪರಿಸ್ಥಿತಿ' ಸಂದರ್ಭದಲ್ಲಿ ಸಂಸತ್ತಿನ ಒಳಗೆ ಬಹಳ ಚರ್ಚೆಯ ವಿಷಯವಾಯಿತು. ಈ ಸಂಬಂಧ ನಾಗೇಶ್ ಹೆಗಡೆಯವರ ಸ್ವಲ್ಪಕಾಲ ಭೂಗತರಾಗುವ ಪರಿಸ್ಥಿತಿ ಬಂದೊದಗಿತು.[೧೦]

ನಾಗೇಶ್ ಹೆಗಡೆಯವರ ಬರವಣಿಗೆ ಪಂಡಿತರಿಂದ ಪಾಮರರಿಗೂ ವಿಜ್ಞಾನದ ವಿಷಯದಲ್ಲಿ ಅರ್ಥಮಾಡಿಸುವ ನಿಟ್ಟಿನಲ್ಲಿ ವೈಶಿಷ್ಟ್ಯಪೂರ್ಣವಾದುದು. ಕನ್ನಡ ಭಾಷೆಯ ಬಳಕೆ ಮತ್ತು ಅದರ ರಚನಾ ವಿನ್ಯಾಸದ ಅನನ್ಯತೆಯಿಂದಲೇ ವಿಶಿಷ್ಟ ಅರ್ಥಗಳನ್ನು ಹೊಮ್ಮಿಸಬಲ್ಲ, ವಿಜ್ಞಾನ ವಿಷಯದಲ್ಲಿ ತಮಗಿರುವ ತಿಳುವಳಿಕೆ ಹಾಗೂ ಅನುಭವಗಳಿಗೆ ಕಥನದ ಆಕಾರಗಳನ್ನು ನೀಡಿ ವಿಜ್ಞಾನ ಅಪಥ್ಯ ಎನ್ನುವವರಿಗೂ ಕೂಡ ತುಂಬಾ ಶ್ರದ್ಧೆಯಿಂದ ಓದಿಸಿಕೊಳ್ಳುವ ಇವರ ಬರಹಗಳು ಅನುಭವದ ಹೊಸತನ ಚಿಂತನೆಯ ಪ್ರಖರತೆ ವಿಶಿಷ್ಟ ಅಭಿವ್ಯಕ್ತಿಯ ವಿಧಾನದ ಹೊಸತನಗಳಿಂದ ಉತ್ತಮವಾದವು ಎಂದು ಹೇಳಬಹುದು.

ಪ್ರಸ್ತುತದಲ್ಲಿ ಮಾನವನ ಅತಿ ಆಸೆಗೆ, ಅಭಿವೃದ್ಧಿ ಎಂಬ ಅಂಧಶ್ರದ್ಧೆಗೆ ಅಪಾಯದ ಅಂಚಿಗೆ ತಲುಪಿರುವ ಭೂಮಿಯನ್ನು ಮುಂದಿನ ಜನಾಂಗಕ್ಕೆ ಕಾಪಾಡಿಕೊಳ್ಳಲು ನಾವು ಯಾವ ರೀತಿಯ ಅಭಿವೃದ್ಧಿಯನ್ನು ಹೊಂದಬೇಕು, ಯಾವ ಮಾದರಿಯ ಜೀವನ

ಶೈಲಿಯನ್ನು ಅಳವಡಿಸಿಕೊಳ್ಳಬೇಕು, ಇದರಲ್ಲಿ ಮುಂದುವರೆದ ರಾಷ್ಟ್ರಗಳ ಜವಾಬ್ದಾರಿಗಳೇನು ಹಾಗೂ ಜಗತ್ತಿನ ಪ್ರತಿಯೊಬ್ಬ ವ್ಯಕ್ತಿಯ ಜವಾಬ್ದಾರಿ ಯಾವ ತರಹದ್ದು? ಹೇಗೆ ಇವೇ ಮುಂತಾದ ವಿಚಾರಗಳನ್ನು ನಾಗೇಶ್ ಹೆಗಡೆಯವರು ತಮ್ಮ ಎಲ್ಲಾ ಬರವಣಿಗೆಗಳಲ್ಲೂ ಚರ್ಚಿಸಿದ್ದಾರೆ.

ನಾಗೇಶ್ ಹೆಗಡೆಯವರ ಸುಮಾರು ಲೇಖನಗಳು ಪುಸ್ತಕ ರೂಪದಲ್ಲಿ ಪ್ರಕಟಗೊಂಡಿವೆ ಹಾಗೆ ಪ್ರಕಟಗೊಂಡ ಪುಸ್ತಕಗಳ ಸಂಖ್ಯೆ ಸುಮಾರು ೨೫ ಕೆಲವು ಪುಸ್ತಕಗಳನ್ನು ಸಂಗ್ರಹಿಸಿ ಸಂಪಾದಿಸಿದ್ದಾರೆ. ಹಲವು ಪ್ರಮುಖ ಪುಸ್ತಕಗಳನ್ನು ಅನುವಾದಿಸಿದ್ದಾರೆ. ತಮ್ಮ ಬರವಣಿಗೆಗಾಗಿ ಅವರು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಹಗೂ ಡಾ.ಶಿವರಾಮ ಕಾರಂತ ಪ್ರಶಸ್ತಿಗಳೊಂದಿಗೆ ಜೀವಮಾನದ ಸಾಧನೆಗಾಗಿ 'ಮಾಧ್ಯಮ ಅಕಾಡೆಮಿ' ಪ್ರಶಸ್ತಿಯನ್ನು ಪಡೆದಿದ್ದಾರೆ.

ನಾಗೇಶ್ ಹೆಗಡೆಯವರ ಬದುಕು ಆದರ್ಶಪ್ರಾಯವಾದುದು. ನಾಗೇಶ್ ಹೆಗಡೆಯವರ ಬದುಕು ಅವರ ಬರಹದಂತೆಯೇ ಪ್ರಖರ ವೈಚಾರಿಕತೆಯಿಂದ ಕೂಡಿದೆ. ಅವರು ತಮ್ಮ ಬರವಣಿಗೆಯಲ್ಲಿ ಪ್ರತಿಪಾದಿಸುತ್ತಾ ಬಂದ ಸರಳ ಸುಸ್ಥಿರ ಬದುಕನ್ನೇ ಆದರ್ಶದ ರೀತಿಯಲ್ಲಿ ನಡೆಸುತ್ತಿದ್ದಾರೆ. ಇವರ ಜೀವನಶೈಲಿ ಪ್ರಸ್ತುತ ಆಧುನಿಕ ಮತ್ತು ಯಾಂತ್ರಿಕ ಜಗತ್ತಿನಲ್ಲಿ ಪ್ರತಿಯೊಬ್ಬರಿಗೂ ಮಾದರಿಯಾಗಿದೆ.

ನಾಗೇಶ್ ಹೆಗಡೆಯವರು ತಮ್ಮ ಬರವಣಿಗೆಯ ಉದ್ದಕ್ಕೂ ತಮ್ಮ ವಿಚಾರ ಮಂಡನೆಗೆ ಕನ್ನಡ ಭಾಷೆಯನ್ನು ದುಡಿಸಿಕೊಂಡಿರುವ ರೀತಿ ಬಹಳ ವಿಶಿಷ್ಟವಾದುದು. ವಿಜ್ಞಾನ ವಿಷಯವನ್ನು ಅರ್ಥಮಾಡಿಕೊಳ್ಳುವುದು ಬಹು ತ್ರಾಸದಾಯಕವಾದುದು ಎಂದು ಭಾವಿಸಿದ್ದವರಿಗೂ ಕೂಡ ಅತ್ಯಂತ ಸರಳವಾಗಿ, ಅಷ್ಟೇ ಪರಿಣಾಮಕಾರಿಯಾಗಿ ವಿಷಯವನ್ನು ಪ್ರಸ್ತುತಪಡಿಸುತ್ತಾರೆ.[೧೧]

ನಾಗೇಶ್ ಹೆಗಡೆಯವರು ವಿಜ್ಞಾನದ ವಿಚಾರಗಳನ್ನು ಸೂತ್ರದ ರೂಪದಲ್ಲಿಯೇ ಅಥವಾ ಪ್ರಯೋಗಶಾಲೆಯಲ್ಲಿ ಪ್ರಾಯೋಗಿಕವಾಗಿ ಬಂದಂತಹ ಫಲಿತಾಂಶದ ರೀತಿಯಲ್ಲಿಯೇ ಪ್ರಸ್ತುತ ಪಡಿಸುವುದಿಲ್ಲ. ಹೊಸ ಹೊಸ ವೈಜ್ಞಾನಿಕ ಮತ್ತು ತಾಂತ್ರಿಕ ಆವಿಷ್ಕಾರಗಳ ಸಂದರ್ಭದಲ್ಲಿ ಜಗತ್ತು ಬಿಂಬಿಸುವ ಏಕಮುಖ ಅಭಿಪ್ರಾಯವನ್ನು ಮಾತ್ರ ಹೇಳದೆ ವೈಚಾರಿಕ ಹಿನ್ನೆಲೆಯಲ್ಲಿ ಅವುಗಳನ್ನು ಸೋಸುವ ಕ್ರಿಯೆ ಅನನ್ಯವಾದುದು ಮತ್ತು ಅವುಗಳ ಬಹುಮುಖ ಪರಿಣಾಮಗಳನ್ನು ಓದುಗನಿಗೆ ತಮ್ಮ ಚಿಂತನೆ, ಅನುಭವ, ತಿಳಿವಳಿಕೆ ಮುಖಾಂತರ ಅಭಿವ್ಯಕ್ತಿಸುತ್ತಾರೆ.

**ಚಂದ್ರಶೇಖರ ನಂಗಲಿ:** ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ವಿಮರ್ಶಕರಲ್ಲಿ ಒಬ್ಬರಾದ ಇವರು ಕನ್ನಡದ ಪ್ರಮುಖ ಪರಿಸರ ಬರಹಗಾರರು ಮೂಲತಃ ಕನ್ನಡ ಪ್ರಾಧ್ಯಾಪಕರಾದ ಇವರು ವಿಜ್ಞಾನದಲ್ಲಿ ಅತೀವ ಆಸಕ್ತಿ ಬೆಳೆಸಿಕೊಂಡಿದ್ದಾರೆ. ಇವರ ಸ್ವಂತ ಊರು ಕೋಲಾರದ 'ನಂಗಲಿ'ಯಾಗಿದ್ದರೂ ಎಲ್ಲಾ ವಿದ್ಯಾಭ್ಯಾಸ ಪೂರ್ತಿಯಾಗಿ ನಡೆದದ್ದು ಬೆಂಗಳೂರಿನಲ್ಲಿ ಚಂದ್ರಶೇಖರ ನಂಗಲಿಯವರು ಆಧುನಿಕ ಕನ್ನಡ ವಿಮರ್ಶೆಯ ಬೆಳವಣಿಗೆಯಲ್ಲಿ ವಹಿಸಿದ ಪಾತ್ರ ಅತ್ಯಂತ ಮಹತ್ತರವಾದುದು. ನಂಗಲಿಯವರು ತಮ್ಮ ಸಾಹಿತ್ಯ ಬರಹಕ್ಕಾಗಿ ಕನ್ನಡದ ವಿವಿಧ ಪ್ರಬೇಧಗಳನ್ನು ಉಪಯೋಗಿಸಿಕೊಂಡಿದ್ದರೂ ಬೆಂಗಳೂರಿನ ಸುತ್ತಮುತ್ತಲಿನ ಪ್ರಚಾರದಲ್ಲಿದ್ದ ಆಗುಹೋಗುಗಳ ಬಗ್ಗೆ ಅಲ್ಲಿ ತಾವು ಕಂಡ ಪರಿಸರದ ಬಗ್ಗೆ ಹೊಸ ತಿರುವನ್ನು ತಂದುಕೊಟ್ಟಿದ್ದಾರೆ.

ಬಹುತೇಕ ನಗರ ಪ್ರದೇಶಗಳಲ್ಲಿ ಶುದ್ಧ ನೀರು ಮತ್ತು ಹೊಲಸು ನೀರು ನಾನಾ ನಿಮಿತ್ತವಾಗಿ ಗಂಗೆ–ಯಮುನೆಯಂತೆ ಕೂಡಿ ಹರಿಯುತ್ತವೆ. ಪೈಪ್ ಸೋರುತ್ತಿದೆ, ಒಡೆದು ಹೋಗಿದೆ, ಆದ್ದರಿಂದ ಹೀಗಾಗುತ್ತಿದೆ ಎಂದು ಅಧಿಕಾರಿಗಳು ಕುಂಟು ನೆಪ ಹೇಳಿ ಕಾಲಕಳೆಯುತ್ತಿದ್ದಾರೆ. ದೊಡ್ಡ ಮೋರಿಗಳ ನೆಟ್‌ವರ್ಕ್‌ನಲ್ಲಿ ಹರಿಯುವ ಕಪ್ಪುಕೊಳಚೆಯ ನೀರು ಎಲ್ಲಿಗೆ ಹೋಗಬಹುದು? ಎಂಬ ಪ್ರಶ್ನೆ ಅವರಲ್ಲಿ ಹುಟ್ಟುತ್ತದೆ. ಇದನ್ನು ಸಂಸ್ಕರಿಸುವ ಶುದ್ಧೀಕರಣ ಮಾಡುವ ಘಟಕಗಳಾಗಲಿ ಅಥವಾ ಜೈವಿಕಗೊಬ್ಬರವನ್ನಾಗಿ ಪರಿವರ್ತಿಸುವ ಕಾರ್ಯಗಾರಗಳಾಗಲಿ ಬೆಂಗಳೂರಿನಲ್ಲಿ ಇಲ್ಲ. ಈ ಎಲ್ಲಾ ಕೊಳಚೆ ನೀರನ್ನು ಕೆರೆಗಳಿಗೆ ಅಥವಾ ಸರೋವರಗಳಿಗೆ ನೇರವಾಗಿ ಹಾಯಿಸಿದ್ದಾರೆ. ಅದರಿಂದ ಆಗುವ ಜಲಮಾಲಿನ್ಯ ಅಲ್ಲಿ ವಾಸಿಸುವ ಜಲಚರ ಪ್ರಾಣಿಗಳ ಮಾರಣಹೋಮ ಆಗುತ್ತದೆ. ಹಾಗೂ ಶುದ್ಧನೀರಿನ ಜೊತೆ ಈ ಮಾಲಿನ್ಯ ನೀರು ಬೆರೆತು ಮನವ ಕುಲದ ಮೇಲೆ ದುಷ್ಪರಿಣಾಮ ಬೀರುತ್ತದೆ ಇದರಿಂದ ಆಗುವ ದುರಂತವನ್ನು ಚಂದ್ರಶೇಖರರವರು ತಮ್ಮ ಲೇಖನದಲ್ಲಿ ಅದರಿಂದಾಗುವ ಪರಿಣಾಮವನ್ನು ಸೂಕ್ತ ಮಾಹಿತಿಯೊಂದಿಗೆ ಉಲ್ಲೇಖಿಸಿದ್ದಾರೆ.

ಚಂದ್ರಶೇಖರ ನಂಗಲಿಯವರು ಸಾಮಾಜಿಕ ಬದ್ಧತೆಯ ಭಾಗವಾಗಿ ಸಾಹಿತ್ಯ ರಚನೆಯಲ್ಲಿ ತೊಡಗಿರುವವರು ಇವರು ಪರಿಸರ ಸಂರಕ್ಷಣೆಯ ಬಗ್ಗೆ ಅಪಾರ ಕಾಳಜಿ ಹೊಂದಿದದವರು. ಇವರ ಪ್ರಮುಖ ಪುಸ್ತಕಗಳಲ್ಲಿ ಒಂದಾದ 'ಕಾಡು ಮತ್ತು ತೋಪು' – ಇದರಲ್ಲಿ ಪರಿಸರ ವಿನಾಶದ ಬಗ್ಗೆ ಎಳೆ ಎಳೆಯಾಗಿ ವಿವರಿಸಿದ್ದಾರೆ. ಹಲವು ಸಂಸ್ಕೃತಿಗಳು ಹೇಗೆ ನಮ್ಮಿಂದ ಕಣ್ಮರೆಯಾಗಿ ಹೋಗುತ್ತಿವೆಯೋ ಹಾಗೆಯೇ ಹಲವು ನಗರ ಪಟ್ಟಣಗಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಹಲವು ಕೆರೆ ಕಟ್ಟೆಗಳು ಕಾಣೆಯಾಗುತ್ತಿರುವುದು ದುರದೃಷ್ಟಕರವಾಗಿದೆ.[೨]

ಆಧುನಿಕ ಕನ್ನಡದಲ್ಲಿ ಬರುತ್ತಿರುವ ಪರಿಸರ ಸಂರಕ್ಷಣೆಯ ಬರಹಗಳಲ್ಲಿ ನಂಗಲಿಯವರದು ವಿಶಿಷ್ಟ ಚಿಂತನಾತ್ಮಕ ಬರಹಗಳಾಗಿದೆ. ಪರಿಸರ ಸಂರಕ್ಷಣೆಯ ಬಗ್ಗೆ ಜಾಗೃತಿ ಮೂಡಿಸುವ ದೃಷ್ಟಿಯಲ್ಲಿ ಇವರ ಬರವಣಿಗೆಗಳು ಹೆಚ್ಚು ಕನ್ನಡ ಓದುಗರನ್ನು ಆಕರ್ಷಿಸುತ್ತಿವೆ. ನಂಗಲಿಯವರ ಬರವಣಿಗೆಗಳು, ಜನರಲ್ಲಿ ಜಾಗೃತಿ ಮೂಡಿಸುವುದರ ಜೊತೆಗೆ ಗಂಭೀರ ವಿಷಯಗಳನ್ನು ಅದರ ಸಮಸ್ಯೆಗಳನ್ನು ಸಾಮಾನ್ಯ ಓದುಗನ ಅಂತರಾಳವನ್ನು ತಲುಪುವ ಹಗೆ ನಿರೂಪಣೆಗೊಂಡಿರುತ್ತವೆ.

ಇವರ ಲೇಖನಗಳಲ್ಲಿ ಸಮಾಜದ ಕಳಕಳಿ ಪರಸರದ ಅವಾಂತರಗಳಿಗೆ ಕಾರಣೀಕೃತ ಅಂಶಗಳ ವಿರುದ್ಧ ನೈತಿಕ ಸಿಟ್ಟು, ಅಸಮಾಧಾನ ವ್ಯಕ್ತವಾಗುತ್ತವೆ. ಪ್ರತಿಯೊಬ್ಬ ಓದುಗನು ತನ್ನ ಸುತ್ತಮುತ್ತಲಿನ ಪರಿಸರದ ಬಗ್ಗೆ ಕಾಳಜಿ ಹೊಂದಲು ಸಮಾಜದ ಬಗ್ಗೆ ಕಳಕಳಿಯನ್ನು ಬೆಳೆಸಿಕೊಳ್ಳಲು ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಳ್ಳಲು ಇವರ ಲೇಖನಗಳು ಪ್ರೇರಕ ಶಕ್ತಿಯಾಗುತ್ತವೆ.

ಚಂದ್ರಶೇಖರನಂಗಲಿಯವರು ಬರಹದ ಮೂಲಕ ಓದುಗರಿಗೆ ಹಲವು ಪ್ರಶ್ನೆಗಳನ್ನು ಮುಂದಿಡುತ್ತಾರೆ. ನಮ್ಮ ದೇಹದಲ್ಲಿ ತೊಂದರೆ ಉಂಟಾದರೆ ಅದನ್ನು ಸರಿಪಡಿಸಿಕೊಳ್ಳಲು ಹೇಗೆ ಶ್ರಮವಹಿಸುತ್ತೇವೆಯೋ ಹಾಗೆಯೇ ಮೀನು ಮುಂತಾದ ಜಲಚರಗಳು ತಾವು ಜೀವಿಸುವ ಆವರಣವನ್ನು ಶುಚಿಯಾಗಿಟ್ಟುಕೊಳ್ಳಲು ಅನವರತ ಶ್ರಮಿಸುತ್ತವೆ. ಆದರೆ ಮನುಷ್ಯ ತಾನು ಜೀವಿಸುವ ನೈಸರ್ಗಿಕ ಆವರಣವನ್ನು ಶುಚಿಯಾಗಿಟ್ಟುಕೊಳ್ಳಲು ಏಕೆ ಕಲಿತಿಲ್ಲ....? ದಿನೇ ದಿನೇ ಕುಸಿಯುತ್ತಿರುವ ಅಂತರ್ಜಲದ ಮಟ್ಟವನ್ನು ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.....? ಪ್ರಸ್ತುತವಾಗಿ ಬೇರುಬಿಟ್ಟಿರುವ ಹೆಮ್ಮರಗಳ ಸುತ್ತಮುತ್ತ ನೀರು ಇಂಗುವ ವ್ಯವಸ್ಥೆ ಇಲ್ಲದಿರುವುದರಿಂದ ಇಂಥ ಮರಗಳಿಗೆ ಭವಿಷ್ಯವಿದೆಯೇ? ಎಲ್ಲ ಕಡೆಯಲ್ಲೂ ಕಾಂಕ್ರಿಟು ನೆಲದ ಸುವಿಶಾಲ ಹಾಸುಗೆಗಳು, ಟಾರು ರಸ್ತೆಗಳು ಸಮೃದ್ಧವಾಗಿ ಹಮ್ಮಿಕೊಂಡಿವೆ. ಇದರಿಂದ ಮರಗಿಡಗಳು ಅತೀ ಹೆಚ್ಚು ವರ್ಷ ಉಳಿಯುವುದಾದರೂ ಹೇಗೆ? ಇಂತಹ ಹತ್ತು ಹಲವು ಪ್ರಶ್ನೆಗಳನ್ನು ಓದಗಾರರ ಮುಂದೆ ತೆರೆದಿಡುತ್ತಾರೆ.[೧೩]

ಚಂದ್ರಶೇಖರ ನಂಗಲಿಯವರು ಸೃಜನಶೀಲ ಸಾಹಿತ್ಯ ಪ್ರಕಾರಗಳಾದ ಕತೆ, ಕಾದಂಬರಿ, ನಾಟಕ, ಮತ್ತು ಸಾಹಿತ್ಯ ವಿಮರ್ಶೆಯೊಂದಿಗೆ ಪರಿಸರ ಸಾಹಿತ್ಯ ಪ್ರಕಾರದಲ್ಲೂ ತಮ್ಮ ಛಾಪು ಮೂಡಿಸಿದ್ದಾರೆ. ಪರಸರ ಕುರಿತು ಪ್ರಕಟವಾದ ಇವರ ಮುಖ್ಯ ಕೃತಿ 'ಕಾಡು ಮತ್ತು ತೋಪು' ಕೃತಿಯ ಹಿಂದೆ ಪ್ರೀತಿ ಮತ್ತು ಪರಿಸರ ಸಂರಕ್ಷಣೆಯ ಒತ್ತಾಸೆಗಳಿವೆ ಎಂದು ಅರಿಯಬಹುದು.

**ಟಿ.ಎಸ್. ವಿವೇಕಾನಂದ :** ಟಿ.ಎಸ್.ವಿವೇಕಾನಂದ ಅವರು ಕಳೆದ ಎರಡೂವರೆ ದಶಕಗಳಿಂದ ಪರಿಸರ ಶಿಕ್ಷಣ/ಸಂರಕ್ಷಣೆ ಕ್ಷೇತ್ರದಲ್ಲಿ ತೊಡಗಿಸಿಕೊಂಡವರೂ, ಮೂಲತಃ ಸಮಾಜಶಾಸ್ತ್ರದ ವಿದ್ಯಾರ್ಥಿಯಾದ ಇವರು ಯಶಸ್ವಿ ಪತ್ರಕರ್ತರಾಗಿದ್ದಾಗಲೇ ವೃತ್ತಿಪತ್ರಿಕೋದ್ಯಮದಿಂದ ಹೊರಬಂದು ಪರಿಸರ ಕ್ಷೇತ್ರದ ಸಾಮಾಜಿಕ ನಿರ್ಲಕ್ಷ್ಯಗಳನ್ನು ಜನರ ಮುಂದಿಟ್ಟರು. ಭಾರತೀಯ ಪರಿಸರವಾದದ ಸೊಗಲಾಡಿತನವನ್ನು ಬಿಚ್ಚಿಡುತ್ತಲೇ ಪರಿಸರ ಸಂರಕ್ಷಣೆಗೆ ಹೊಸದಾದ ಜನಪರ ಆಯಾಮಗಳನ್ನು ಸೃಷ್ಟಿಸಿದ್ದರು.

ಟಿ.ಎಸ್.ವಿವೇಕಾನಂದ ಅವರು ನಮ್ಮ ಮಧ್ಯೆ ಇರುವ ಪ್ರಮುಖ 'ಹಸಿರು' ಚಿಂತಕ. ಪರಿಸರದ ಬಗ್ಗೆ ಜನಪ್ರಿಯವಾಗಿ ಆಲೋಚಿಸುವ ಪರಿಸರವಾದಿಗಳ ಮಧ್ಯೆ ಇವರ ಬರಹಗಳು ವಿಭಿನ್ನ ದೃಷ್ಟಿಕೋನಗಳಿಂದ ಗಮನ ಸೆಳೆಯುತ್ತವೆ. ಪರಿಸರದ ಸಂರಕ್ಷಣೆಯ ಮೇಲೆ ಅವರಿಗಿದ್ದ ಕಾಳಜಿ ಅವರ ಬರವಣಿಗೆಯ ರೂಪದಲ್ಲಿಯೇ ತಿಳಿಯುತ್ತದೆ. ಮತ್ತು ಅವರ ಬರವಣಿಗೆಯಲ್ಲಿ ನಿಸ್ಪಕ್ಷಪಾತ ಗುಣವನ್ನು ಗಮನಿಸಬಹುದು. ಪರಿಸರದ ಬಗ್ಗೆ ರಮ್ಯವಾದ ಕಾಳಜಿ ತೋರುವ ಕೃತಕ ಪರಿಸರವಾದಿಗಳಿಂದ ಪರಿಸರಕ್ಕೇ ಅಪಾಯವಿದೆ ಎಂದು ಸಾರುತ್ತಾ ಬಂದವರು. ಇವರ ದೃಷ್ಟಿಯಲ್ಲಿ ನಿಜವಾದ ಪರಿಸರ ಸಂರಕ್ಷಣೆ ಕಾಡಿನಂಚಿನಲ್ಲಿ ವಾಸಿಸುವ ಬಡಕುಟುಂಬದಿಂದ ಮಾತ್ರ ಸಾಧ್ಯ. ನಗರ ಪಟ್ಟಣಗಳಲ್ಲಿ ಹಸಿರು ಟವೆಲ್‌ನ್ನು ಹಾಕಿಕೊಂಡು ನಾವು ಪರಿಸರವಾದಿಗಳು ಪರಿಸರ ಸಂರಕ್ಷಣೆಯ ಬಗ್ಗೆ ನಾವು ಜಾಗೃತಿ ಮೂಡಿಸುತ್ತೇವೆ ಎಂದು ಹೋರಾಟ ಮಾಡುವವರೆಲ್ಲಾ ಢೋಂಗಿಗಳು ತಮ್ಮ ಹಿತದೃಷ್ಟಿಗಾಗಿ ತಮ್ಮ ಸ್ವಾರ್ಥಕ್ಕಾಗಿ ಹೋರಾಟದ ಹಾದಿಯನ್ನು ಹಿಡಿಯುತ್ತಿದ್ದಾರೆ ಎಂಬ ವಾದವನ್ನು ಟಿ.ಎಸ್. ವಿವೇಕಾನಂದರ ಬರವಣಿಗೆಯಲ್ಲಿ ನಾವು ಕಾಣಬಹುದು.

ಇಂತಹ ಪರಿಸ್ಥಿತಿಯ ನಡುವೆ ನಿಂತು ವಿವೇಕಾನಂದರವರು ಸಮಗ್ರ ದೃಷ್ಟಿಯಿಂದ ಪರಿಸರದ ಮುಂದಿನ ಭವಿಷ್ಯದ ಬಗ್ಗೆ ಆಲೋಚಿಸುವುದು ವಿಶೇಷವಾಗಿದೆ. ಟಿ.ಎಸ್.ವಿವೇಕಾನಂದರ ದೃಷ್ಟಿಯಿಂದ ಪರಿಸರ ಎಂದರೆ ಕೇವಲ ಮರ, ಗಿಡ, ಪ್ರಾಣಿ, ಪಕ್ಷಿ, ಬೆಟ್ಟ ಗುಡ್ಡ ನದಿಗಳಲ್ಲ. ನಮ್ಮ ನಾಗರಿಕತೆಯ ವಿಜ್ಞಾನ-ತಂತ್ರಜ್ಞಾನ ಹಾಗೂ ಅಲ್ಲಿನ ಆಚಾರ-ವಿಚಾರ ಪರಂಪರೆಗಳನ್ನು ಒಳಗೊಂಡ ಎಲ್ಲಾ ಜೀವನ ಕ್ರಮವೇ ಪರಿಸರ.[೧೪]

ಇವರು ಕೃತಕ ಪರಿಸರವಾದಿಗಳನ್ನು ಮೊದಲಿನಿಂದಲು ವಿರೋಧಿಸುತ್ತ ಬರುತ್ತಿದ್ದಾರೆ. ಅಭಿವೃದ್ಧಿಯ ಹೆಸರಿನಲ್ಲಿ ಪರಿಸರ ಯಾವ ರೀತಿಯಲ್ಲಿ ವಿನಾಶದ ಅಂಚಿನಲ್ಲಿದೆ ಎಂಬುದು ಇವರ ಬರವಣಿಗೆಯಲ್ಲಿ ಕಾಣಬಹುದು. ಹಾಗೆಯೇ ಅನಾದಿಕಾಲದಿಂದಲೂ ಕಾಡಿನಂಚಿನಲ್ಲಿ ವಾಸಿಸುವ ಆದಿವಾಸಿಗಳ ಅಸ್ತಿತ್ವಕ್ಕೆ ಸಂಬಂಧಪಟ್ಟಂತೆ ಅವರನ್ನು ಪರಿಸರ ಸಂರಕ್ಷಣೆಯ ಹೆಸರಿನಲ್ಲಿ ಅಲ್ಲಿಂದ ಹೊರಹಾಕುವುದರ ಬಗ್ಗೆ ಕಾಡಿದ ನಿಜವಾದ ವಾರಸುದಾರರೇ

ಆದಿವಾಸಿಗಳು ಎಂಬುವುದು ಅವರ ಬಲವಾದ ವಾದವಾಗಿದೆ. ಅಂಥವರನ್ನು ಬಕ್ಕಲೆಬ್ಬಿಸುವ ಸರ್ಕಾರಗಳ ಧೋರಣೆಗಳನ್ನು ಅವರ ಬರವಣಿಗೆಯ ಮೂಲಕ ಖಂಡಿಸುತ್ತಿದ್ದಾರೆ.

ಅಭಿವೃದ್ಧಿಯ ಹೆಸರಿನಲ್ಲಿ ಪರಿಸರದ ಮೇಲೆ ನಡೆಯುತ್ತಿರುವ ದೌರ್ಜನ್ಯ ಮತ್ತು ಅತ್ಯಾಚಾರದ ಬಗೆಗೆ ಟಿ.ಎಸ್. ವಿವೇಕಾನಂದರು ಸಿಡಿದೆದ್ದು ಏಕಾಂಗಿಯಾಗಿ ಬರವಣಿಗೆಯ ರೂಪದಲ್ಲಿ ಹೋರಾಟವನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ವಿವೇಕಾನಂದರು ಪರಿಸರದ ಬಗ್ಗೆ ಚಿಂತಿಸುತ್ತಾ ಪರ್ಯಾಯಗಳ ಬಗ್ಗೆ ಧ್ಯಾನಿಸುವ ಇವರು ಪರಿಸರ ರಕ್ಷಣೆಯ ಹೋರಾಟವನ್ನು ಮತ್ತು ಓದುಗನಲ್ಲಿ ಜಾಗೃತಿಮೂಡಿಸುವಲ್ಲಿ ಪಣತೊಟ್ಟಿದ್ದಾರೆ. ಹಗೆಯೇ ಇವರು ಪರಿಸರದ ಬಗ್ಗೆ ಪ್ರಜ್ಞಾವಂತರ ಜೊತೆಗೆ ಸಂವಾದಿಸುತ್ತ ಸರ್ಕಾರದ ಕುರುಡು ನೀತಿಯನ್ನು ಟೀಕಿಸುತ್ತಲೇ ಜನಸಾಮಾನ್ಯರಲ್ಲಿ ಜಾಗೃತಿ ಮೂಡಿಸುತ್ತಿದ್ದಾರೆ.[೧೫]

ಇವರ ಬರವಣಿಗೆಯಲ್ಲಿ ಅಮೇರಿಕಾ ಮತ್ತು ಭಾರತದಂತಹ ದೇಶಗಳಲ್ಲಿ ಪರಸರದ ಪರಿಕಲ್ಪನೆಯೇ ಭಿನ್ನವಾಗಿರುತ್ತದೆ. ಇಲ್ಲಿ ನೈಸರ್ಗಿಕ ಸಂಪತ್ತು ಅಸಮಾನ ಹಂಚಿಕೆಯಲ್ಲಿ ಪರ್ಯಾಯಾವಸನಾಗುತ್ತದೆ. "ಪ್ರಾಣಿಗಳಿಗಾಗಿ ಕಾಡು" ಎಂಬ ಅಮೇರಿಕನ್ ಮಾದರಿ ಅರಣ್ಯವಾಸಿ ಅಥವಾ ಆದಿವಾಸಿಗಳ ಸ್ಥಳ ಕಾಡು" ಭಾರತಕ್ಕೆ ಅಗತ್ಯವಿರುವ ಮಾದರಿಗಳನ್ನು ಅವರ ಬರವಣಿಗೆಯಲ್ಲಿ ಕಾಣಬಹುದು. ಹಾಗೆಯೇ 'ಯಾರದು ಈ ಕಾಡು' ಎಂದು ಪ್ರಶ್ನಿಸುತ್ತಾ ಮುಂಡಾ ಜನಾಂಗದ ಪೂರ್ವಿಕ ದಾನಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಟದ ಪರಿಯನ್ನು ಹೇಗೆ ಮುಂದುವರಿಸುತ್ತಾನೆ ಎಂಬುದನ್ನು ಇವತ್ತಿನ ಆದಿವಾಸಿಗಳ ಮೇಲೆ ನಡೆಯುವ ಕ್ರೌರ್ಯವನ್ನು ಹೋಲಿಸುತ್ತಾ ನಿರೂಪಿಸಿದ್ದಾರೆ.

ಟಿ.ಎಸ್.ವಿವೇಕಾನಂದರವರು ಒಬ್ಬ ಚಳವಳಿಗಾರ ಒಬ್ಬ ಲೇಖಕರಾಗಿರು-ವುದಕ್ಕಿಂತಲೂ ಪರಿಸರದ ಮೇಲೆ ಒಬ್ಬ ನೈತಿಕ ಕಾಳಜಿಯುಳ್ಳ ಸಾಮಾನ್ಯ ಮನುಷ್ಯನಾಗಿ ಪರಿಸರ ಉಳಿಸುವುದಕ್ಕಾಗಿ ತಮ್ಮ ಬರವಣಿಗೆಗಳ ಮೂಲಕ ಪಣ ತೊಟ್ಟಿರುವುದು ಗಮನಾರ್ಹವಾಗಿದೆ. ಈ ನಿಟ್ಟಿನಲ್ಲಿ ಇವರು ಇಟ್ಟ ಅನೇಕ ದಿಟ್ಟ ಹೆಜ್ಜೆಗಳು ಭಾರತೀಯ ಪರಿಸರವಾದದಲ್ಲಿ ಮಹತ್ವದ ಮೈಲುಗಲ್ಲುಗಳಾಗಿವೆ.

## ಕೊನೆಟಿಪ್ಪಣಿಗಳು

೧. ಕನ್ನಡ ಸಾಹಿತ್ಯದಲ್ಲಿ ನಿಸರ್ಗ ಮತ್ತು ಸ್ಥಿತ್ಯಂತರ, ವಿವಿಧ ಲೇಖಕರು, ಪು. ೧೯
೨. ಕುವೆಂಪು, ಮಲೆನಾಡಿನ ಚಿತ್ರಗಳು, ಪು. ೨–೫
೩. ಕುವೆಂಪು ಸಮಗ್ರ ಕಾವ್ಯ ಸಂಪುಟ, ೨ ಪ್ರಸ್ತಾವನೆ, ಜಿ.ಎಸ್.ಎಸ್. ಪು. ೧೭
೪. ಜಿ.ಜಿ.ಎಲ್. ಸ್ವಾಮಿ, ಹಸುರು ಹೊನ್ನು, ಪು. ೪೦–೪೫
೫. ಜಿ.ಜಿ.ಎಲ್. ಸ್ವಾಮಿ, ಸಸ್ಯಪುರಾಣ, ಪು. ೯೦–೯೨
೬. ಕೆ.ಪಿ.ಪೂ. ತೇಜಸ್ವಿ, ಪರಿಸರದ ಕತೆ, ಪು. ೧೨
೭. ಕೆ.ಪಿ.ಪೂ. ತೇಜಸ್ವಿ, ಚಿದಂಬರ ರಹಸ್ಯ, ಪು. ೯
೮. ಕೆ.ಪಿ.ಪೂ. ತೇಜಸ್ವಿ, ವಿಸ್ಮಯ ೧, ಪು. ೨೫–೨೬
೯. ನಾಗೇಶ್ ಹೆಗಡೆಯವರ ಆಯ್ದ ಬರಹಗಳು, ಕೆ.ವಿ. ಸುಬ್ಬಣ್ಣ ನೆನಪಿನ ಮಾಲೆ, ಪು. ೧೭
೧೦. ನಾಗೇಶ್ ಹೆಗಡೆ, ಇರುವುದೊಂದೇ ಭೂಮಿ, ಪು. ೧೪–೧೫
೧೧. ನಾಗೇಶ್ ಹೆಗಡೆ, ಅಭಿವೃದ್ಧಿಯ ಅಂಧಯುಗ, ಪು. ೪೩
೧೨. ಚಂದ್ರಶೇಖರ ನಂಗಲಿ, ಕಾಡು ಮತ್ತು ತೋಪು, ಪು. ೮೦–೮೨
೧೩. ಚಂದ್ರಶೇಖರ ನಂಗಲಿ, ನಿರ್ಬೀಜೀಕರಣ ವಿರಾಟ್ ಸ್ವರೂಪ, ಪು. ೩೪–೩೬
೧೪. ಟಿ.ಎಸ್.ವಿವೇಕಾನಂದ, ಕಿರಿಯರಿಗಾಗಿ ಪರಿಸರ, ತೇಜಸ್ವಿ, ನಾಗೇಶ್ ಹೆಗಡೆ, ಪು.೪೫–೧೯
೧೫. ಟಿ.ಎಸ್. ವಿವೇಕಾದನಂದ, ಭೂಮಿಗೀತೆ, ಪು. ೧೮–೨೦

*****

# ಅಧ್ಯಾಯ – ೪

# ಪರಿಸರ ಕಥನಗಳ ವಿಶ್ಲೇಷಣೆ

ಕನ್ನಡ ಕಾವ್ಯದಲ್ಲಿ ನಿಸರ್ಗ ವಿಷಯವನ್ನು ಕುರಿತು ಮಾತನಾಡುವಾಗ ನಿಸರ್ಗದ ಅನನ್ಯತೆ ಮತ್ತು ಸಂಬಂಧಾತ್ಮಕತೆಯನ್ನು ಅರ್ಥೈಸಿಕೊಳ್ಳುವುದು ಒಳಿತು. ಪ್ರಕೃತಿ ಒಂದು ಸ್ಥಿತಿಯಾಗಿದೆ. ಇದರ ಚಲನೆ ಜಗತ್ತಿನ ಗತಿಯ ಜೊತೆಗೆ ಬದಲಾಗುವಂಥದ್ದು. ಮನುಷ್ಯನ ಗತಿಯೊಂದಿಗೆ ನಾಶವಾಗುವಂತಹದ್ದು. ಅವನ ಪ್ರಾಥಮಿಕ ಅಸ್ತಿತ್ವವಿರುವುದು ನಿಸರ್ಗದ ಮಡಿಲಲ್ಲಿಯೇ. ಈ ಹಂತದಲ್ಲಿ ನಿಸರ್ಗ ಮತ್ತು ಮನುಷ್ಯ ಬೇರೆಯಲ್ಲ. ಈ ಸ್ಥಿತಿಯಿಂದ ಮನುಜ ಬೇರ್ಪಡುತ್ತಾ ಹೋಗುವುದಕ್ಕೆ ಪ್ರಕೃತಿ ಮತ್ತು ಮನುಜನ ಸ್ಥಿತ್ಯಂತರ ಎಂದು ಹೇಳಬಹುದು. ಏಕೆಂದರೆ ಇದರ ಹೊರಗೆ ಮಾನವ ಚಲಿಸಿದ ಕ್ಷಣದಿಂದ ಅವನು ಬಳಕೆದಾರನೂ, ಪ್ರಕೃತಿಯನ್ನು ಬಳಸಲ್ಪಡುವ ಅನುಭೋಗಸ್ಥ ಕೂಡ ಆಗುತ್ತಾನೆ. ಪ್ರಕೃತಿಯು ಮನುಷ್ಯನ ದೇಹದಲ್ಲಿರುವ ಅಂಗಗಳಲ್ಲಿ ಇದು ಕೂಡ ಒಂದು ಎಂದು ಮನುಜ ಅರಿಯುವುದು ಅವಶ್ಯಕವಾಗಿದೆ.

ಮನುಷ್ಯನ ಯೋಚನೆಗೆ ಮೂಲ ಪ್ರೇರಣೆ ನಿಸರ್ಗ. ಇದನ್ನು ಆದಿಮಾನವನಿಂದ ಆಧುನಿಕ ಮಾನವನವರೆಗೆ ಕಾಣಬಹುದು. ಪ್ರಕೃತಿಯ ವಿಸ್ಮಯಗಳು ನಿಗೂಢ ಭಯದ ಸಂಕೇತಗಳು ಆದ ಅತಿವೃಷ್ಟಿ ಅನಾವೃಷ್ಟಿ ಗುಡುಗು ಸಿಡಿಲು ಮಳೆ ಮಿಂಚು ಇತ್ಯಾದಿಗಳನ್ನು ಕಂಡು ಭಯಗೊಂಡು ಇದರಿಂದ ತನ್ನನ್ನು ರಕ್ಷಿಸಿಕೊಳ್ಳಲು ಇದರ ಬಗ್ಗೆ ಆಲೋಚಿಸತೊಡಗಿದ. ಆಗ ನಿಸರ್ಗದಲ್ಲಾಗುತ್ತಿದ್ದ ನಿರಂತರ ಚಲನಶೀಲ ಕ್ರಿಯೆಯ ಹಿನ್ನೆಲೆಯಲ್ಲಿ ತನ್ನ ಬದುಕನ್ನು ರೂಪಿಸಿಕೊಂಡ. ಪ್ರಕೃತಿಗೂ ಮನುಜನಿಗೂ ಒಂದು ಅವಿನಾಭವ ಸಂಬಂಧವಿದೆ. ಒಂದು ಮರ ಚಿಗುರೊಡೆದು ಎಲೆಯಾಗಿ, ಹೂವಾಗಿ, ಕಾಯಾಗಿ, ಹಣ್ಣಾಗಿ ಮತ್ತೆ ಎಲೆ ಉದುರುವುದು ಮುಂತಾದ ಕ್ರಿಯೆಗಳ ಮೂಲಕ ಮನುಷ್ಯನು ಕೂಡ ಅವನ ಜನನ ಬಾಲ್ಯ, ಯೌವ್ವನ, ಮುಪ್ಪು ಹಾಗೂ ಮರಣಗಳನ್ನು ಈ ಅರ್ಥದಲ್ಲಿ ಗ್ರಹಿಸಿ ನಿಸರ್ಗದೊಂದಿಗೆ ತನ್ನ ಬದುಕಿನ ಅವಿನಾಭಾವ ಸಂಬಂಧವನ್ನು ಬೆಸೆದುಕೊಳ್ಳುವ ಮೂಲಕ ಈ ರೀತಿಯ ವ್ಯವಸ್ಥೆಯಲ್ಲಿ ಪ್ರಕೃತಿಯ ಜೊತೆ ಜೊತೆಯಲ್ಲಿ ಬಾಳನ್ನಾರಂಭಿಸಿದ.

ಆಧುನಿಕ ಕನ್ನಡ ಸಾಹಿತ್ಯದ ವಿಶೇಷ ಪ್ರಜ್ಞೆಯ ಪ್ರಾತಿನಿಧಿಕ ರೂಪದಲ್ಲಿ ನಮಗೆ ಹಲವು ಪರಿಸರ ಕಥನಗಳು ಕಾಣಸಿಗುತ್ತವೆ. ನವೋದಯದ ಕಾಲಘಟ್ಟದಲ್ಲಿ 'ಪ್ರಕೃತಿ ಆರಾಧನೆ'ಯು ಒಂದು ಪ್ರಮುಖ ನೆಲೆಯಾಗಿ ಅನಾವರಣಗೊಳ್ಳುತ್ತಾ, ಪರಿಸರ ಕಥನಗಳ ಸೃಷ್ಟಿಗೆ ಬುನಾದಿಯನ್ನು ಒದಗಿಸಿತು. ಆದರೂ ಅಲ್ಲಿಂದ ಆರಂಭವಾಗಿ ಇದುವರೆಗಿನ ನೂರಕ್ಕೂ ಮಿಕ್ಕಿದ ವರ್ಷಗಳಲ್ಲಿ ಸೃಷ್ಟಿಯಾದ ಪರಿಸರ ಕಥನಗಳ ಸಂಖ್ಯೆ ಕೇವಲ

ಬೆರಳೆಣಿಕೆಯಷ್ಟಾಗಿದೆ. ನಮ್ಮ ಸಮಾಜದ ಬಡತನ, ಹಸಿವು, ಜಾತಿಸಮಸ್ಯೆ, ಅಸ್ಪೃಶ್ಯತೆ, ಲಿಂಗಭೇದ ಇವುಗಳ ಚರ್ಚೆಯ ನಡುವೆ ಸಮಗ್ರ ಪ್ರಕೃತಿಯ ಅಳಿವು-ಉಳಿವಿನ ಪ್ರಶ್ನೆ ಅಷ್ಟಾಗಿ ಇಲ್ಲಿನ ಬರಹಗಾರರಿಗೆ ಕಾಡಿದಂತಿಲ್ಲ.

ಆದರೂ ಕುವೆಂಪು ಅವರಂಥ ದಾರ್ಶನಿಕ ಕವಿಗಳು 'ಮಲೆನಾಡಿನ ಚಿತ್ರಗಳು' ಕೃತಿಯನ್ನು ರಚಿಸಿದ ತರುವಾಯ ಅದೇ ಮಾದರಿಯನ್ನು ಅನುಸರಿಸಿ ಕನ್ನಡದಲ್ಲಿ ಹಲವು ಕೃತಿಗಳು ರಚನೆಯಾಗಿವೆ. ಈಗಾಗಲೇ ಸೂಚಿಸಿದ ಬಿ.ಜಿ.ಎಲ್.ಸ್ವಾಮಿ, ತೇಜಸ್ವಿ, ನಂಗಲಿ, ನಾಗೇಶ್ ಹೆಗಡೆ, ವಿವೇಕಾನಂದರ ಕೃತಿಗಳು ಕನ್ನಡದ ಪ್ರಮುಖ ಪರಿಸರ ಕಥನಗಳಾಗಿವೆ. ಈ ಪ್ರಮುಖ ಕೃತಿಗಳಲ್ಲಿ ನಮ್ಮ ಪರಿಸರ ಪ್ರಜ್ಞೆಯ ಲೇಖಕರು ಇಡೀ ಜೀವಲೋಕವನ್ನು ಗ್ರಹಿಸಿರುವ ರೀತಿಯನ್ನೂ, ಅದನ್ನು ಕನ್ನಡ ಓದುಗಲೋಕ ಸ್ವೀಕರಿಸಿರುವ ರೀತಿಯನ್ನೂ ಈ ಭಾಗದಲ್ಲಿ ಚರ್ಚೆಗೆತ್ತಿಕೊಳ್ಳಲಾಗುತ್ತದೆ.[೧]



ಪರಿಸರ ಎಂದರೇನು? ಅದರ ಸೌಂದರ್ಯ ಮತ್ತು ಕರಾಳ ಮುಖಗಳ ದರ್ಶನ ಈ ಕೃತಿಗಳಲ್ಲಿ ಮೂಡಿರುವ ರೀತಿ ಯಾವುದು? ಪರಿಸರ ರಕ್ಷಣೆಯ ಪ್ರಜ್ಞೆ ಮೂಡಬೇಕಾದ ತುರ್ತಾದರೂ ಏನು? ನಮ್ಮ ಜೀವಪರಿಸರದ ನಿಗೂಢ ಸತ್ಯಗಳನ್ನು ಈ ಲೇಖಕರು ಹೇಗೆ ಅನಾವರಣಗೊಳಿಸಿದ್ದಾರೆ? ಪ್ರಪಂಚದ ಆರ್ಥಿಕ, ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಆಗುಹೋಗುಗಳ ಜೊತೆಗಿನ ಪರಿಸರದ ಸಂಬಂಧ ಎಂಥದು? ಪರಿಸರ ಮಾಲಿನ್ಯ, ಪರಿಸರ ನಾಶ ಮುಂತಾದ ಘೋರ ಕೃತ್ಯಗಳನ್ನು ಎಸಗುತ್ತಿರುವ ಮನುಷ್ಯರನ್ನು ಈ ವಿಷಯದಲ್ಲಿ ಪ್ರಜ್ಞಾವಂತರಾಗಿಸುವುದು ಹೇಗೆ? ಅದನ್ನು ನಮ್ಮ ಈ ಲೇಖಕರು ಕಥನಾತ್ಮಕವಾಗಿ ಮುಟ್ಟಿಸುತ್ತಿರುವ ರೀತಿ ಯಾವ ಸ್ವರೂಪದ್ದು? ಮೊದಲಾದ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತ ಅದನ್ನು ಪ್ರಸ್ತುತ ಅಧ್ಯಾಯದಲ್ಲಿ ವಿವರವಾಗಿ ವಿಶ್ಲೇಷಿಸಲಾಗುತ್ತದೆ.

## ೪.೧. ಪರಿಸರದ ಬಹುರೂಪ ದರ್ಶನ

ಪ್ರಕೃತಿಯ ಅನನ್ಯತೆಯ ಅಪಾರವಾದ ಸಿರಿ ಸೊಬಗನ್ನು ಕವಿಗಳು ತಮ್ಮ ಸಾಹಿತ್ಯದಲ್ಲಿ ವರ್ಣಿಸಿರುವುದು ಸಾಮಾನ್ಯ. ಅದಲ್ಲದೆ ಪರೋಕ್ಷವಾಗಿ ಅಂದರೆ ವಿವಿಧ ಪಾತ್ರಗಳ ಹಿನ್ನೆಲೆಯಲ್ಲಿ ನಿಸರ್ಗ ವ್ಯಾಪಾರವನ್ನು ಅಲ್ಲಲ್ಲಿ ಚಿತ್ರಿಸಿರುವ ವಿಶೇಷವಾದ ಬಗೆಯನ್ನು ನಾವು ಕನ್ನಡ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ಹಾಗೆ ನೋಡುವುದಾದರೆ ಆದಿ ಕವಿ 'ಪಂಪ' ತನ್ನ ಆದಿಪುರಾಣದಲ್ಲಿ ಬಳ್ಳಿಯೊಂದನ್ನು 'ಲತಾ' ನರ್ತಕಿಯಾಗಿ ವರ್ಣಿಸಿರುವ ವಿಶೇಷವಾಗಿದ್ದು ಪರಿಸರದ ದರ್ಶನಕ್ಕೆ ಪೀಠಿಕೆಯಾಗಿ ಹೊರಹೊಮ್ಮಿದೆ.

ಪ್ರಾಚೀನ ಕಾಲದಿಂದಲೂ ನಮ್ಮ ಕನ್ನಡ ಕಾವ್ಯ ಪರಂಪರೆಯಲ್ಲಿ ಈ ನಾಡಿನ ಸಂಸ್ಕೃತಿಯ ಜನ ಭೂಮಿ - ಪ್ರಕೃತಿಯ ಮೇಲೆ ಅತೀವ ಪ್ರೀತಿ, ಗೌರವ, ಕಾಳಜಿ

ಕಳಕಳಿಯನ್ನು ಹೊಂದಿದ್ದರೆಂಬುದು ದಟ್ಟವಾಗಿದೆ. ಜೊತೆಗೆ ಪೂರ್ವಕಾಲದಿಂದಲೂ ಇಲ್ಲಿನ ಜನ ಭೂಮಿಯನ್ನು ಮತ್ತು ಪ್ರಕೃತಿಯನ್ನು ಆರಾಧಿಸಿ ಪೂಜಿಸುತ್ತಿದ್ದರೆಂಬುದಕ್ಕೆ ಹಲವಾರು ದಾಖಲೆಗಳಿವೆ. ಹೀಗೆ ಕನ್ನಡದ ವಿಶಿಷ್ಟ ಸಂಸ್ಕೃತಿಯಲ್ಲಿ ಬೆಳೆದುಬಂದಿರುವ ಪಂಪ, ರನ್ನ, ನಾಗವರ್ಮ. ನಾಗಚಂದ್ರ, ಕುಮಾರವ್ಯಾಸ ಮುಂತಾದ ಪ್ರಾಚೀನ ಕವಿಗಳಿಂದ ಆಧುನಿಕ ಕವಿ ಕುವೆಂಪುವರೆಗೂ ತಮ್ಮ ಮಹಾಕಾವ್ಯಗಳಲ್ಲಿ ಪ್ರಕೃತಿ ಆರಾಧನೆ ಮತ್ತು ಪರಿಸರದ ವರ್ಣನೆಯೂ ಒಂದಾಗಿ ಬಿಂಬಿತವಾಗಿದೆ.[೨]

ಸೌರ ಜಗತ್ತಿನಲ್ಲಿ ಭೂಮಿ ಒಂದು ಅಪರೂಪದ ಕೊಡುಗೆ. ಕಾಲಕಾಲಕ್ಕನುಗುಣವಾಗಿ ಇದು ತೊಡುವ ನಾನಾರೂಪಗಳಿಂದ ಈ ಜೀವ ಜಗತ್ತು ಇಷ್ಟೊಂದು ವಿಕಾಸವಾಗಿದೆ. ಇದು ಒಂದು ಜಡ ಮೂಲವಸ್ತುವಿನ ಅಮೂರ್ತ ಕ್ರಿಯೆಯ ಕಾರಣದಿಂದುಂಟಾದ ಮೂರ್ತರೂಪ. ಇದರ ಪರಿಣಾಮವೇ ಪ್ರಕೃತಿಯ ಸಸ್ಯ ಮತ್ತು ಪ್ರಾಣಿಗಳ ವಿಶೇಷ ಜೀವ ಪರಿಸರವಾಗಿದೆ. ಭೂಮಿಯ ಮೇಲಿನ ಈ ಜೀವಿಗಳ ಬಗ್ಗೆ ವೇದಪುರಾಣಗಳ ಕಾಲದಿಂದಲೂ ಪ್ರಸ್ತಾಪ ಸಾಗಿ ಬಂದಿದ್ದರೂ ಭಿನ್ನ ಭಿನ್ನ ಜೀವಿಗಳನ್ನೆಲ್ಲಾ ಒಟ್ಟಿಗೆ ಸೇರಿಸಿ 'ಜೀವ ವೈವಿಧ್ಯ'ವೆಂದು ಕರೆಯಲ್ಪಟ್ಟಿದ್ದು ತೀರಾ ಇತ್ತೀಚೆಗೆ. 'ಜೀವ ವೈವಿಧ್ಯ' ಎಂಬ ಪದ ಸಾಮಾನ್ಯ ಬಳಕೆಗೆ ಬಂದುದು ೧೯೮೦ರ ದಶಕದಲ್ಲಿ ಜಾಗತಿಕ ಸಂಶೋಧನಾ ಸಂಸ್ಥೆ, ಜಾಗತಿಕ ಬ್ಯಾಂಕ್, ಜಾಗತಿಕ ನಿಸರ್ಗ ನಿಧಿ ಮೊದಲಾದವರ ಮೂರ್ತ ಅಭಿವ್ಯಕ್ತಿಯಾದ 'ಜೀವ ವೈವಿಧ್ಯ' ಕ್ರಮೇಣ ಹೊಸ ಆಯಾಮ ಪಡೆಯಿತು. ಇಂದಿನ ಈ ಜೀವ ವೈವಿಧ್ಯಪದಕ್ಕೆ ಒಂದು ಬಿಲಿಯನ್ ವರ್ಷಗಳ ಇತಿಹಾಸವಿದೆ. ಹಳೆಯ ಜೀವ ಪ್ರಭೇದಗಳು ಕಣ್ಮರೆಯಾಗಿ ಹೊಸ ಹೊಸ ಜೀವ ಪ್ರಭೇದಗಳು ಸಾಗಿ ಬಂದಿವೆ.

ಇದನ್ನೆಲ್ಲ ಗಮನಿಸಿದರೆ ಒಂದೊಂದು ಯುಗ ಕಾಲದಲ್ಲಿ ಒಂದೊಂದು ಪ್ರಾಣಿಪಕ್ಷಿಗಳ ದೈಹಿಕ ಮತ್ತು ಮಾನಸಿಕ ಪ್ರಬಲಶಕ್ತಿಗಳ ಪ್ರಭಾವವಿರುವುದು ಕಂಡುಬರುತ್ತದೆ. ಮೀನು, ಡೈನೋಸಾರ್, ಅರ್ನಿತೋಮೈಮಸ್, ಇಕ್ತಿಯೋಸಾರಸ್ ಮುಂತಾದ ಯಾವ ಜೀವಿಯೂ ತಾನಿದ್ದ ಕಾಲವನ್ನು ಬಿಟ್ಟರೆ ಮತ್ತೊಂದು ಕಾಲದಲ್ಲಿ ಕಾಣಿಸಿಕೊಂಡಿರುವ ದಾಖಲೆಗಳಿಲ್ಲ. ಹಾಗಾಗಿ ಇವುಗಳೆಲ್ಲ ಇದ್ದು ಕಣ್ಮರೆಯಾಗಿರುವ ಜೀವಿಗಳು. ಆದರೆ ಈ ಕಾಲದಲ್ಲಿ ಮಾನವನಿದ್ದಾನೆ. 'ಹೋಮೋ ಸೇಪಿಯನ್ಸ್' ಪ್ರಭೇದಕ್ಕೆ ಸೇರಿದ ಈ ಮಾನವ ಜಾತಿಗಳೆಲ್ಲ ಮುಂದೊಂದು ದಿನ ಸರ್ವನಾಶವಾದರೆ ಆಶ್ಚರ್ಯವಿಲ್ಲ. ಇವನ ಬದಲಾಗಿ ಮುಂದಿನ ಯುಗದ ವಾತಾವರಣಕ್ಕೆ ಅನುಗುಣವಾಗಿ ಬೇರೆ ಬೇರೆ ಜೀವನ ಪ್ರಭೇದಗಳು ಅಸ್ತಿತ್ವ ಪಡೆದುಕೊಳ್ಳುತ್ತವೆ. 'ಒಂದು ಸಾವಿನ ಹಿಂದೆ ಮತ್ತೊಂದರ ಹುಟ್ಟು'. ಇದು ಪ್ರಕೃತಿಯ ನಿಯಮ ಎಂದು ಹೇಳಬಹುದು. ಪ್ರಕೃತಿಯಲ್ಲಿ ಹೀಗೆ ಸಾಗಿ ಬಂದಿರುವ ಹುಟ್ಟು ಸಾವುಗಳ

ನಿಯಮಕ್ಕೊಳಪಟ್ಟ, ಪ್ರಾಣಿ, ಪಕ್ಷಿ, ಕೀಟ, ಸಸ್ಯ ಮುಂತಾದವು ಜೀವಸಂಕುಲಗಳಾಗಿವೆ. ಪ್ರಕೃತಿಯಲ್ಲಿ ಒಂದು ಜೀವಕ್ಕೆ ಆಹಾರವನ್ನೊದಗಿಸುವುದರಲ್ಲೇ ಮತ್ತೊಂದರ ಸಾವಿನ ತಂತ್ರವನ್ನಡಗಿಸಿದೆ. ಇದೇ ಭೂಮಿತತ್ತ್ವದಲ್ಲಿರುವ ಸಂಕೀರ್ಣ ಬಂಧ. ಇದು ಪ್ರಾಣಿ ಪಕ್ಷಿಗಳ ಒಂದು ಆಹಾರ ಸರಪಳಿ. ಅವುಗಳು ಅದರ ಹಸಿವನ್ನು ನೀಗಿಸುವುದೇ ಹೊರತು ಮತ್ಯಾವುದೇ ದುರುದ್ದೇಶವಿಲ್ಲ. ಹೀಗೆ ಪ್ರಕೃತಿಯಲ್ಲಿ ನಡೆಯುತ್ತಿರುವ ಜೀವನ ಕ್ರಮ.

ಮನುಷ್ಯ ತನ್ನ ಜೀವನದ ಅಸ್ತಿತ್ವವನ್ನು ಮೀರಿ ತನ್ನ ಕೀರ್ತಿ, ಅಧಿಕಾರ, ಹೆಸರು ಸಂಸಾರ ಮುಂತಾದವುಗಳನ್ನು ಪಡೆಯಲು ಪ್ರಕೃತಿಯ ನಿಧಿಗಳನ್ನೆಲ್ಲ ಕಬಳಿಸುವ ಗುಣ ಜೀವಹೀನವಾದುದ್ದು. ಮಾನವ ಸಂಸ್ಕೃತಿಗಿಂತ ಶ್ರೇಷ್ಠವಾದದು ಸಸ್ಯ, ಪ್ರಾಣಿ, ಮತ್ತಿತರ ಮಾನವೇತರ ಜೀವಗಳದ್ದೆಂದು ಹೇಳಬಹುದು. ಈ ಎಲ್ಲ ಜೀವಿಗಳಿಗೂ ಅವುಗಳದ್ದೇ ಆದ ಸಂಸ್ಕೃತಿ ಇದೆ ಎಂಬುದನ್ನು ಸಾಹಿತ್ಯ ಮತ್ತು ಸಾಹಿತ್ಯೇತರ ಕೃತಿಗಳಿಂದ ಕಂಡುಕೊಳ್ಳಲಾಗಿದೆ. ಇಂತಹ ಜೀವಿಗಳ ಸಂಸ್ಕೃತಿಯಿಂದಲೇ ಎರವಲಾಗಿ ಪಡೆದು ಕಲಿತ ಮಾನವ ನಾಗರಿಕತೆ ಬೆಳೆದಂತೆ ವಿಕೃತರೂಪ ಪಡೆಯುತ್ತಿದ್ದಾನೆ. ಇದರ ಪರಿಣಾಮವಾಗಿ ಸಸ್ಯ, ಪ್ರಾಣಿ, ಸಂಸ್ಕೃತಿಯನ್ನು ಅವುಗಳದ್ದೂ ಒಂದು ಸಂಸ್ಕೃತಿ ಇದೆ ಎಂಬುದನ್ನು ಅರಿಯದೆ ಅವುಗಳನ್ನು ಕೀಳಾಗಿ ಕಾಣುತ್ತ ನಡೆಸಿಕೊಳ್ಳುತ್ತಿರುವುದು ವಾಸ್ತವವಾಗಿದೆ.[3] ಈ ಮನೋಧರ್ಮ-ದಿಂದಾಗಿಯೇ ತಾನು ಮಾತ್ರ ಶ್ರೇಷ್ಠ ಉಳಿದ ಜೀವಿಗಳಲ್ಲಿ ಕನಿಷ್ಠವೆಂದು ತಿಳಿದು ಇಡೀ ಭೂಮಿಯ ಜೀವಗಣಗಳನ್ನೆಲ್ಲ ತೃಣವಾಗಿ ಕಂಡು ಅದನ್ನು ಹೀನಾಯವಾಗಿ ನಡೆಸಿಕೊಳ್ಳುತ್ತಿರುವುದು ಈ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಆಧುನಿಕತೆಯ ವಿಜ್ಞಾನ ತಂತ್ರಜ್ಞಾನಗಳು ನದಿ ನೀರಿಗೆ ಅಣೆಕಟ್ಟುಗಳನ್ನು ಕಟ್ಟಿ ಬಹುರೂಪತೆಯ ದೇಶೀ ತಳಿಗಳನ್ನು ಮೆಟ್ಟಿ ಏಕರೂಪತೆಯ ಹೈಬ್ರಿಡ್ ತಳಿಗಳನ್ನು ರೂಢಿಗೆ ತಂದು ಪ್ರಕೃತಿಯ ಸ್ವಾತಂತ್ರ್ಯ, ಸೃಷ್ಟಿ ನಿಯಮಿತ ತಳಿಗಳನ್ನು ಕಸಿದುಕೊಂಡಿವೆ. ಸರ್ಕಾರ ಅಧಿಕಾರಿಗಳು, ಬಹುರಾಷ್ಟ್ರೀಯ ಕಂಪನಿಗಳ ಮಾಲೀಕರು ವಿಜ್ಞಾನಿಗಳೇ ಇದರ ಸೂತ್ರಧಾರರು. ಇವರು ವ್ಯವಸಾಯ ಮತ್ತು ಗ್ರಾಮ ಪ್ರಧಾನವಾದ ಈ ಭಾರತ ದೇಶದಲ್ಲಿ ಇವುಗಳ ಅಭಿವೃದ್ಧಿಗೆ ಪೂರಕವಾದ ವಿಜ್ಞಾನ ತಂತ್ರಜ್ಞಾನಗಳನ್ನು ಬಳಸದೆ ಪ್ರಬಲ ಯೋಜನೆಗಳ ಮೂಲಕ ಬಂಡವಾಳಶಾಹಿ ಪರ ಧೋರಣೆ ತಾಳಿವೆ. ಇವರು ಏನೇ ಮಾಡಿದರೂ ಕೊನೆಗೆ ಭೂಮಿಗೆ ಮುಳುವಾಗಿರುವ ಧೋರಣೆಯನ್ನು ಕವಿ "ಭೂಮಿಗೆ ಟೋಪಿ ಹಾಕಿದರು" ಎಂದು ಟಿ.ಎಸ್.ವಿವೇಕಾನಂದರು ಹೇಳುತ್ತಾರೆ.

ಮೂಲತಃ ಮನುಷ್ಯನ ಪ್ರಗತಿಯ ಪಥದಲ್ಲಿ ಪ್ರಕೃತಿಯ ನಾಶವನ್ನು ಸಮರ್ಥಿಸುವ ಜೀವ ವಿರೋಧಿ ನೀತಿಯಿದೆ. ಆದ್ದರಿಂದಲೇ ಭೂಮಿಯ ಮೇಲೆ ಅಭಿವೃದ್ಧಿಯ ಹೆಸರಲ್ಲಿ

ನಡೆಸುವ ಮನುಷ್ಯನ ಕೃತ್ಯಗಳೆಲ್ಲ ಹಿಂಸೆಯಿಂದ ಕೂಡಿದೆ. ಇವನ ಪ್ರಗತಿಗೆ ಮೊದಲ ಬಲಿ ಭೂಮಿ. ಈ ಪ್ರಕೃತಿಯ ಭೂಮಿತಾಯಿಯನ್ನು ಮನುಷ್ಯ ತನ್ನ ಆಟದ ವಸ್ತುವಿನಂತೆ ಬಳಸಿಕೊಂಡು ಆ ಆಟದಿಂದ ಆನಂದದ ಜಯಪಡೆದು ಅದರ ಮತ್ತಿನಲ್ಲಿ ತೇಲುತ್ತಿದ್ದಾನೆ. ಹಾಗೆಯೇ ಮನುಷ್ಯ ಭೂಮಿಗಿಂತ ಶ್ರೇಷ್ಠ ಸಾಧಕನಂತಾಗಿ ದೊಡ್ಡವನಾಗಿ ಮೆರೆಯುತ್ತಿದ್ದಾನೆ. ಇವನ ಅಹಂ ಮಿತಿಮೀರುತ್ತಿದೆ. ಮನುಷ್ಯರಿಗೆ ಭೂಮಿ ನೀಡುವ ಔತಣಕ್ಕೆ ಪ್ರತಿಕ್ರಿಯೆಯಾಗಿ ಅವನು ಕೃತಜ್ಞತಾ ಭಾವ ತೋರದೆ ತನ್ನ ಉಂಡಮನೆಗೆರಡು ಬಗೆವ ಗುಣದಿಂದ ಅದಕ್ಕೆ ಹಿಂಸಾ ಕೃತ್ಯಗಳನ್ನು ನೀಡುತ್ತಾ ಬಂದಿದ್ದಾನೆ.

ಇಂದು ಅಭಿವೃದ್ಧಿಯನ್ನೇ ಗುರಿಯಾಗಿಟ್ಟುಕೊಂಡು ಶರವೇಗದಲ್ಲಿ ಚಲಿಸುತ್ತಿರುವ ಮನುಷ್ಯ ತನ್ನ ಸಮಾಧಿಯನ್ನು ತಾನೇ ತೋಡಿಕೊಂಡಂತಾಗಿ, ಪ್ರಕೃತಿಯ ವಿಕೋಪದಿಂದ ಮಾನವ ನಿರ್ಮಿತ ಸಂಪತ್ತು ಮತ್ತು ಸರ್ವಜೀವಿಗಳು ಜೀವಂತ ಸಮಾಧಿಯಾಗುತ್ತಿವೆ. ಹಾಗಾಗಿ ಮನುಷ್ಯ ಮತ್ತೆ ಭೂಮಿತಾಯಿಯ ಮಡಿಲನ್ನು ಅರಸಿಹೋಗುವುದು ಅನಿವಾರ್ಯವಾಗಿದೆ. ಹೀಗೆ ವಿನಾಶ ಸ್ಥಿತಿಯಿಂದ ಜಾಗೃತಗೊಂಡ ಮನುಷ್ಯ ಭೂಮಿಯನ್ನು ಪ್ರಾರ್ಥಿಸುವ, ಕೃತಜ್ಞತೆ ತೋರುವ ವಿನಯಶೀಲ ಗುಣಪ್ರದರ್ಶಿಸುವ ಮೂಲಕ ಪರಿವರ್ತನೆ ಹೊಂದಬೇಕಾಗಿದೆ. ಭೂಮಿಗೆ ವಿನಾಶಕಾರಿ ಗುಣವೂ ಸ್ವಾಭಾವಿಕವಾದದ್ದು ಅದು. ಹಿಂಸೆಯನ್ನು ಯಾವಾಗಲೊಮ್ಮೆ ಹೊರಹಾಕುತ್ತದೆ. ಅಂದರೆ ಭೂಕಂಪ, ಚಂಡಮಾರುತ, ಬರಗಾಲ ಮುಂತಾದ ರೀತಿಯಲ್ಲಿ ಪ್ರಕೃತಿಯ ವಿಕೋಪ ಆಗಾಗ್ಗೆ ಸಂಭವಿಸುತ್ತಿರುವುದನ್ನು ಗಮನಿಸಬಹುದು.

ಇತ್ತೀಚಿನ ದಿನಗಳಲ್ಲಿ ಜನಸಂಖ್ಯೆಯು ಹೆಚ್ಚುತ್ತಿರುವುದರಿಂದ ಅದರ ಅಸಮತೋಲನದ ಸ್ಥಿತಿಯಲ್ಲಿಯೂ ಹಲವು ಬದಲಾವಣೆಯನ್ನು ನೋಡಬಹುದು. ಮಾನವ ಒಂದು ದೃಷ್ಟಿಯಲ್ಲಿ ಪ್ರಕೃತಿಯನ್ನು ಪೂಜಿಸುವ, ಆರಾಧಿಸುವ, ಗೌರವಿಸುವುದು ಮಾನವ ಸಂಸ್ಕೃತಿಯಾದರೆ ಇನ್ನೊಂದು ದೃಷ್ಟಿಯಲ್ಲಿ ಅಪರಿಪೂರ್ಣವಾದ ಮಾನವ ತನ್ನ ಆಸೆ, ಆಮಿಷಗಳ ಈಡೇರಿಕೆಗಾಗಿ ಪ್ರಕೃತಿಯನ್ನು ತನ್ನ ಭೋಗಕ್ಕೆ ಇರುವುದೆಂದು ನಂಬಿ ಮೂಲಭೂತ ಅಗತ್ಯಕ್ಕಿಂತ ಮೀರಿ ಪ್ರಕೃತಿಯ ಸಂಪತ್ತನ್ನು ಬಳಸಿಕೊಂಡು ಅದನ್ನು ಹೀನಾಯ ಸ್ಥಿತಿಗೆ ತಳ್ಳಿದ್ದಾನೆ. ಇದನ್ನು ಅರಿಯದೆ ಮನುಷ್ಯ ಇದೇ ಸುಖಜೀವನವೆಂದು ಜೀವನ ನಡೆಸುತ್ತಿರುವುದು ಅವನ ದುರಂತವಾಗಿದೆ. ಪ್ರಕೃತಿಯಲ್ಲಿರುವ ಪ್ರತಿಯೊಂದು ಜೀವಿಯು ಮೌಲ್ಯಭರಿತವಾಗಿವೆ ಮತ್ತು ಸ್ವತಂತ್ರವಾಗಿವೆ. ಪ್ರಕೃತಿ ಮನುಷ್ಯನಿಗೆ ಅನಿವಾರ್ಯ. ಪರಿಸರದಿಂದ ಮಾನವನು ಎಲ್ಲಾ ರೀತಿಯ ಸೌಲಭ್ಯವನ್ನು ಪಡೆದುಕೊಳ್ಳುತ್ತಿದ್ದಾನೆ. ಆದರೆ ಹಿಂತಿರುಗಿ ವಿನಾಶವನ್ನಷ್ಟೇ ಕೊಡುಗೆಯಾಗಿ ಕೊಡುತ್ತಿದ್ದಾನೆ.[೪]

ಇಷ್ಟೆಲ್ಲಾ ಆಕ್ರಮಣ-ಅತ್ಯಾಚಾರವೆಸಗುತ್ತಾ ಬಂದಿರುವ ಬಂಡವಾಳಶಾಹಿ ಬಹುರಾಷ್ಟ್ರೀಯ ಕಂಪನಿಗಳಿಗೆ ರತ್ನಗಂಬಳಿ ಹಾಸಿ ಆಹ್ವಾನಿಸಿ ಇವರ ಹಿತಕಾಯುವ ಯೋಜನೆ ಕಾನೂನುಗಳನ್ನು ಮಾಡಿ ಕಾಯುತ್ತಿರುವವರು ನಮ್ಮ ರಾಜಕಾರಣಿಗಳು. ಇದಕ್ಕೆಲ್ಲ ಹಲವು ಕಾರಣಗಳಿವೆ. ಕೆಲವು ಕಾರ್ಖಾನೆ ಅಣೆಕಟ್ಟುಗಳ ಕಾರ್ಯ ಯೋಜನೆಗಳು ಜನರ ಹಿತದೃಷ್ಟಿಯಿಂದ ದೇಶ ರಾಜ್ಯಗಳ ಅಭಿವೃದ್ಧಿಯಿಂದ ನೆಲೆಗೊಂಡಿದ್ದರೂ ವಿದೇಶಿ ಬಹುರಾಷ್ಟ್ರೀಯ ಕಂಪನಿಗಳು ದುರಾಸೆಯ ಕುತಂತ್ರಕ್ಕೆ ಇಲ್ಲಿನ ಸ್ವದೇಶಿ ವಸ್ತುಗಳನ್ನು ಹಾಗೂ ಇಲ್ಲಿನ ಸಂಸ್ಕೃತಿಯನ್ನು ಬಲಿಕೊಡುತ್ತಿದ್ದಾರೆ.

ಈ ಎಲ್ಲಾ ಬೆಳವಣಿಗೆ ಪರಿಣಾಮಗಳಿಗೆ ಮೂಲ ವಿಜ್ಞಾನದ ಯಂತ್ರ ತಂತ್ರಜ್ಞಾನಗಳು ಇವುಗಳ ನಿಯಂತ್ರಣ ಶಕ್ತಿಯ ಕೇಂದ್ರ ಬಹುರಾಷ್ಟ್ರೀಯ ಕಂಪನಿ ಮತ್ತು ಸರ್ಕಾರಗಳು. ಇವರ್‍ಯಾರಿಗೂ ಪ್ರಕೃತಿ ಮತ್ತು ಜೀವಪ್ರಜ್ಞೆ ಮೂಡದೇ ಇರುವುದೇ ಪ್ರಕೃತಿಯ ವಿನಾಶಕ್ಕೆ ಮೂಲ ಕಾರಣವಾಗಿದೆ. ಅಂದರೆ ಪ್ರಕೃತಿಯಲ್ಲಿರುವ ಪ್ರತಿಯೊಂದು ಮಾಲಿನ್ಯಗೊಂಡು ಇಡೀ ಪರಿಸರವೇ ವಿಷಪೂರಿತವಾಗಿದೆ. ಈ ಎಲ್ಲಾ ಅಂಶಗಳು ಪರಿಣಾಮಕಾರಿಯಾಗಿ ವಿವರಿಸುತ್ತಾ, ಪರಿಸರ ಸಂರಕ್ಷಣೆಯ ಬಗ್ಗೆ ಜಾಗೃತಿ ಮುಡಿಸುತ್ತಿರುವುದು ಆಧುನಿಕ ಕನ್ನಡ ಸಾಹಿತ್ಯದ ಒಂದು ವೈಶಿಷ್ಟ್ಯವಾಗಿದೆ.

ಪರಿಸರದ ಬಹುರೂಪ ದರ್ಶನಗಳಲ್ಲಿ ಬಡತನ ಕೂಡ ಒಂದು. ಜನಸಂಖ್ಯೆ ಸ್ಫೋಟ ಮತ್ತು ಕಡುಬಡತನಗಳು ಪರಸ್ಪರ ಪೂರಕವಾಗಿದೆ. ಏರುತ್ತಿರುವ ಜನಸಂಖ್ಯೆ ಬಡತನಕ್ಕೆ ಕಾರಣವಾಗಿದೆ. ಹೆಚ್ಚುತ್ತಿರುವ ಬಡತನ ಮತ್ತು ಅಜ್ಞಾನ ಮಕ್ಕಳ ಜನನಕ್ಕೆ ಹಾದಿ ಮಾಡಿಕೊಡುತ್ತದೆ. ಜನಸಂಖ್ಯೆ ಹೆಚ್ಚಾದಂತೆ ಪ್ರತಿಯೊಬ್ಬ ವ್ಯಕ್ತಿಗೂ ಸಿಗುವ ಮೂಲಸೌಕರ್ಯ ಕಡಿಮೆಯಾಗುತ್ತಾ ಹೋಗುತ್ತದೆ. ಹಾಗೆಯೇ ಪ್ರತಿಯೊಬ್ಬ ವ್ಯಕ್ತಿಯ ವರಮಾನ ಕಡಿಮೆಯಾಗುತ್ತ ಹೊಗುತ್ತದೆ. ಆಹಾರ, ವಸ್ತ್ರ, ವಸತಿ ಸಮಸ್ಯೆ ಎಲ್ಲೆಲ್ಲಿಯೂ ತಾಂಡವವಾಡುತ್ತಿದೆ. ಆಹಾರದ ಕೊರತೆಯ ಜೊತೆಗೆ ಅದರ ಪೌಷ್ಟಿಕತೆಯ ಪ್ರಮಾಣ ಅತ್ಯಲ್ಪವಾಗಿ ಶಿಶುಮರಣಕ್ಕೆ ಕಾರಣವಾಗುತ್ತದೆ.[೨]

**ನಿರುದ್ಯೋಗ:** ಭಾರತದಲ್ಲಿ ನಿರುದ್ಯೋಗ ಒಂದು ಸಾಮಾಜಿಕ ಸಮಸ್ಯೆಯಾಗಿ ಕಾಡುತ್ತಿದೆ. ಜನಸಂಖ್ಯೆ ಹೆಚ್ಚಿದಂತೆಲ್ಲಾ ನಿರುದ್ಯೋಗ ಉಲ್ಬಣಗೊಳ್ಳುತ್ತಿದೆ. ಸರ್ಕಾರಗಳು ಹೆಚ್ಚು ಹೆಚ್ಚು ಉದ್ಯೋಗಗಳನ್ನು ಸೃಷ್ಟಿಸಿಕೊಡುವ ಸದುದ್ದೇಶವುಳ್ಳದಾಗಿದೆ. ಆದರೆ ಜನಸಂಖ್ಯೆ ಮಿತಿ-ಮೀರಿದರೆ ಉದ್ಯೋಗವನ್ನರಿಸಿ ಬರುವವರ ಸಂಖ್ಯೆಯು ಅಧಿಕವಾಗುತ್ತಿರುವುದರಿಂದ ಸಮಸ್ಯೆ ನಿವಾರಣೆ ಮಾಡುವುದು ಕಠಿಣ ಸವಾಲಾಗುತ್ತದೆ. ನಿರುದ್ಯೋಗದ ಸಮಸ್ಯೆ ನಗರಗಳಲ್ಲಿ ಮಾತ್ರ ಅಲ್ಲದೇ ಗ್ರಾಮೀಣ ಪ್ರದೇಶಗಳಿಗೂ ತಟ್ಟಿದೆ. ಬೇಸಾಯದ ಯಾಂತ್ರೀಕರಣದಿಂದಾಗಿ

ಗ್ರಾಮಸ್ಥರು ನಿರುದ್ಯೋಗಗಳಾಗುತ್ತಿದ್ದಾರೆ. ಭಾರತದಲ್ಲಿ ತಂತ್ರಜ್ಞಾನ ಅಭಿವೃದ್ಧಿ ಹೊಂದಿದಷ್ಟೂ ನಿರುದ್ಯೋಗದ ಸಮಸ್ಯೆ ಹೆಚ್ಚುತ್ತಿದೆ.

ನೈಸರ್ಗಿಕ ವಿಕೋಪಗಳಿಂದ ಪ್ರಾಣಾಹುತಿ, ಸಂತ್ರಸ್ತರ ಪ್ರಮಾಣ ಹೆಚ್ಚಾಗುತ್ತಿರುವುದು ಆತಂಕದ ವಿಚಾರವಾಗಿದೆ. ಇದನ್ನು ತಪ್ಪಿಸಲು ಸಾಧ್ಯವಿಲ್ಲವೆಂದಾದ ಮೇಲೆ, ಹಾನಿಯನ್ನು ಮಿತಗೊಳಿಸುವ ಮಾರ್ಗ ಅನುಸರಿಸುವುದೇ ಸೂಕ್ತ. ಪ್ರತಿ ನೈಸರ್ಗಿಕ ವಿಕೋಪವು ಮಾನವನಿಗೆ ಹೊಸ ಪಾಠ ಕಲಿಸುತ್ತದೆ. ಸಾಮಾಜಿಕ, ಆರ್ಥಿಕ, ಜೀವಪರಿಸರ ಮತ್ತು ಭಾವನಾತ್ಮಕವಾಗಿ ಪರಿಣಾಮಗಳನ್ನು ಉಂಟುಮಾಡುವ ನೈಸರ್ಗಿಕ ವಿಕೋಪವನ್ನು ತಡೆಗಟ್ಟುವ ಹಾಗೂ ಮಿತಗೊಳಿಸುವ ಮೂಲಕ ಭೂಮಿಯನ್ನು ಜೀವಿಸುವುದಕ್ಕೆ 'ಸುರಕ್ಷಾ ವಲಯ'ವನ್ನಾಗಿ ಮಾಡುವುದೇ ಇಂದಿನ ಆದ್ಯತೆಯಾಗಿದೆ.

### ೪.೨. ಮಾನವ ಮತ್ತು ಪ್ರಕೃತಿ ಸಂಬಂಧ

ಮಾನವ ಮತ್ತು ಪ್ರಕೃತಿ ಸಂಬಂಧ ಅನಾದಿಯೂ ಅನನ್ಯವೂ ಆದದ್ದು. ನಿಸರ್ಗ ಮಾನವರ ಮೇಲೆ ಬೀರುವ ಪ್ರಭಾವ ಅಪಾರ. ಪ್ರಕೃತಿಯ ಅಂಶದಲ್ಲಿ ಒಂದಾದ ಮಾನವನಿಗೆ ಅದು ಜೀವನಾವಶ್ಯಕವಷ್ಟೇ ಅಲ್ಲ, ಜೀವನೋತ್ಸಾಹಕವೂ ಹೌದು. ಮನುಷ್ಯ ಮೂಲತಃ ಕಾಡುಪ್ರಾಣಿಯಾಗಿದ್ದ. ಅಲೆಯುವುದು ಅವನ ದಿನಚರಿಯಾಗಿತ್ತು. ಕಾಡು, ಬೆಟ್ಟಗುಡ್ಡ ಗುಹೆಗಳೇ ಅವನ ವಾಸಸ್ಥಳವಾಗಿದ್ದವು.

ಆದಿಮಾನವನಾಗಿದ್ದ ಮನುಷ್ಯ ಕಾಡನ್ನೇ ಅವಲಂಬಿಸಿದ್ದನು. ಕಾಡಿನಲ್ಲಿ ಸಿಗುವ ಗೆಡ್ಡೆ, ಗೆಣಸು, ಹಣ್ಣು, ಹಂಪಲು ಹಾಗೂ ಪ್ರಾಣಿಗಳನ್ನೇ ಆಹಾರವನ್ನಾಗಿ ಬಳಸುತ್ತಿದ್ದನು. ಅವನ ದಿನನಿತ್ಯದ ಚಟುವಟಿಕೆಗಳೆಲ್ಲ ಕಾಡಿನಲ್ಲಿಯೇ ನಡೆಯುತ್ತಿದ್ದುದರಿಂದ ಅಲ್ಲಿನ ನಡೆ-ನುಡಿ ಆಚಾರ-ವಿಚಾರಗಳೇ ಅವನ ಮೂಲ ಸಂಸ್ಕೃತಿಯಾಗಿತ್ತು. ಪ್ರಮುಖವಾಗಿ ಋತು ಬದಲಾವಣೆ ಮಾನವನ ಸೃಜನಶೀಲತೆಗೆ ನಿರಂತರ ಪ್ರೇರಣೆಯಾಗಿದೆ.

ಆದಿಮಾನವ ಕಾಡಿನ ಒಡಲಲ್ಲಿ ತನ್ನ ವಿಕಾಸದ ಹೆಜ್ಜೆಗಳನ್ನೂರಿದ್ದು, ಅರಣ್ಯದ ಅಂಗಳದಲ್ಲಿ ಆರಂಭದಲ್ಲಿ ಅಲೆಮಾರಿಯಾಗಿದ್ದ ಮಾನವ ಆಹಾರಕ್ಕಾಗಿ ಬೇಟೆಯನ್ನು ಅವಲಂಬಿಸಿದ. ಅನಂತರ ಕೃಷಿ ಮಾಡುವುದನ್ನು ಕಲಿತು ಒಂದೆಡೆ ನೆಲೆಸಿದ. ಕ್ರಮೇಣ ಭಾಷೆಯನ್ನು ಲಿಪಿಯನ್ನು ಕಲಿತುಕೊಂಡು ಸಾಮಾಜಿಕ ನಾಗರಿಕ ನಡವಳಿಕೆಯನ್ನು ರೂಪಿಸಿಕೊಂಡ. ಅವನ ಈ ವಿಕಾಸದ ಹಂತದಲ್ಲಿ ಅನೇಕ ದೈಹಿಕ ಬದಲಾವಣೆಗಳಾದವು. ನಾಲ್ಕು ಕಾಲಿನ ಮಂಗವಾಗಿದ್ದ ಅವನು ಎರಡು ಕಾಲಿನಲ್ಲಿ ನಡೆಯುವ ಮಾನವನಾಗಿ ಸುಧಾರಣೆಗೊಂಡ. ಹೀಗೆ ಅವನ ಪ್ರಜ್ಞೆಯು ವಿಕಾಸಹೊಂದಿ ಅರಿವು ಅರಳತೊಡಗಿತು.[೬]

ಪ್ರಕೃತಿಯ ವೈಚಿತ್ರ್ಯಗಳನ್ನು ನೋಡಿ ಬೆರಗಾದ ಮಾನವ ಪ್ರಕೃತಿಯ ಹಲವು ವ್ಯವಹಾರಗಳನ್ನು ತಾನು ಅರ್ಥೈಸಲಾಗದಾದ. ಅವೆಲ್ಲ ಅವನಿಗೆ ಬಿಡಿಸಲಾಗದ ಒಗಟಾಗಿ ತೋರಿದವು. ಮಳೆ, ಗಾಳಿ, ಮಿಂಚು, ಸಿಡಿಲು, ಪ್ರವಾಹ, ಭೂಕಂಪ, ಸುನಾಮಿ ಮುಂತಾದವುಗಳ ಹಿಂದೆ ಯಾವುದೋ ಒಂದು ವಿಶಿಷ್ಟ ಶಕ್ತಿ ಕೆಲಸಮಾಡುತ್ತಿದೆ ಎಂದು ಭಾವಿಸಿ ಅದನ್ನು ದೇವರೆಂದು ಕರೆದು ಆರಾಧಿಸತೊಡಗಿದ. ಮಾನವನ ಪ್ರಜ್ಞೆ ಮತ್ತಷ್ಟು ವಿಕಾಸಹೊಂದಿದಾಗ ಅವನು ಸೃಷ್ಟಿಯ ರಹಸ್ಯ ಮತ್ತು ಅದರ ಹಿಂದಿನ ಶಕ್ತಿಯನ್ನು ಅರಿಯಲು ಪ್ರಯತ್ನಿಸಿದ.

ವಿಶ್ವ ಎಂದರೆ ಒಂದರ್ಥದಲ್ಲಿ ಪ್ರಕೃತಿಯ ನೆಲೆ, ಆಕಾಶ, ನದಿ, ಸರೋವರ, ಗಿಡ, ಮರ, ಪ್ರಾಣಿ, ಪಕ್ಷಿ, ಬೆಟ್ಟ, ಗುಡ್ಡ ಇತ್ಯಾದಿ ಎಲ್ಲಾ ನಾಮರೂಪಗಳ ಹಿಂದೆ ಒಬ್ಬ ಸೃಷ್ಟಿಕರ್ತನಿದ್ದಾನೆ ಎಂಬುದನ್ನು ಕಂಡುಕೊಂಡ. ಅದಕ್ಕಾಗಿಯೇ ಏಕಾಗ್ರಚಿತ್ತನಾಗಿ ಧ್ಯಾನಿಸುತ್ತಾ ಕುಳಿತುಕೊಂಡು ಕಾಂತದರ್ಶಿಯಾದ. ಇಂಥ ಪ್ರಕೃತಿಯ ನಡುವೆ ಇದ್ದ ಮಾನವನ ಮನಸ್ಸು ನಿಸರ್ಗ ಸೌಂದರ್ಯವನ್ನು ಆಸ್ವಾದಿಸಿ ಆರಾಧಿಸಲು ತೊಡಗಿತು. ಭೂಮಿಯಲ್ಲಿ ಕಂಡುಬರುವ ಜೀವಿಗಳು ಮತ್ತು ಪರಿಸರದ ನಡುವೆ ಹೊಂದಿರುವ ಸಂಬಂಧವನ್ನು 'ಜೈವಿಕ ಪರಿಸರ ವ್ಯವಸ್ಥೆ' ಎನ್ನುತ್ತೇವೆ. ಭೌತಿಕ ಪರಿಸರವು ಸಂಪೂರ್ಣವಾಗಿ ಜೈವಿಕ ಪರಿಸರವನ್ನು ನಿಯಂತ್ರಿಸುತ್ತದೆ. ಮಾನವನ ಅನಿಯಂತ್ರಿತ ಚಟುವಟಿಕೆಗಳಿಂದ ಪರಿಸರದ ಸ್ಥಿತಿಗಳಲ್ಲಿ ವ್ಯತ್ಯಾಸವಾಗಿ, ಕೆಲವೊಮ್ಮೆ ನಿಸರ್ಗದ ವ್ಯವಸ್ಥೆಯೇ ಪರಿಪೂರ್ಣವಾಗಿ ಬದಲಾಗುತ್ತದೆ.

ಒಮ್ಮೆ ಸುಮ್ಮನೆ ಮಾನವ ವಿಕಾಸ ಚರಿತ್ರೆಯನ್ನು ತಿರುವಿಹಾಕುತ್ತಾ ಹೋದರೆ ಅಲ್ಲಿ ನಮಗೆ ಸಿಗುವುದು 'ಅನಾಗರಿಕ' 'ಅಸಂಸ್ಕೃತಿ' ಪದಗಳ ಬರವಣಿಗೆಯೇ ಕಾಣುತ್ತವೆ. ಪ್ರತಿಯೊಂದು ನಾಗರಿಕತೆಯೂ ತನ್ನ ಪೂರ್ವಿಕ ನಾಗರಿಕತೆಯನ್ನು ಹೀಗೆಂದು ಹೇಳಿದ ಹಲವು ದಾಖಲೆಗಳಿವೆ. ಪ್ರತಿಯೊಬ್ಬ ಇತಿಹಾಸಕಾರ, ಬರಹಗಾರ, ಪದೇ ಪದೇ ಇದೇ ಪದಗಳನ್ನು ಉಲ್ಲೇಖಮಾಡಿದ್ದಾರೆ. ಅಂತೂ ನಮಗಿಂತ ಹಿಂದಿನದು ಅನಾಗರಿಕವಾದದ್ದು ಮತ್ತು ಅಸಂಸ್ಕೃತವಾದದ್ದು ಎಂಬುದು ನಮಗೆ ಸ್ಪಷ್ಟವಾಗಿ ಗೋಚರಿಸುತ್ತದೆ.

ಮಾನವ ಭೂಮಿಯ ಮೇಲೆ ಅವತರಿಸಿದಾಗ ಅವನು ಅನಾಗರಿಕವಾಗಿದ್ದು, ಭಾಷೆ ಮತ್ತು ಬರವಣಿಗೆಯ ಪರಿಜ್ಞಾನವನ್ನು ಹೊಂದಿರಲಿಲ್ಲ. ಅವನಿಗೂ ಪ್ರಾಣಿಗೂ ಹೆಚ್ಚಿನ ವ್ಯತ್ಯಾಸವಿರಲಿಲ್ಲ. ವ್ಯವಸಾಯ, ಪಶುಪಾಲನೆ ಮತ್ತು ಲೋಹಗಳ ಬಳಕೆ ಆರಂಭದಲ್ಲಿ ತಿಳಿದಿರಲಿಲ್ಲ. ಅವನು ರಕ್ಷಣೆಗಾಗಿ ಪ್ರಕೃತಿಯಲ್ಲಿ ಹೇರಳವಾಗಿ ದೊರೆಯುತ್ತಿದ್ದ ಶಿಲೆಗಳನ್ನು ತನ್ನ ಆಯುಧವನ್ನಾಗಿ ಬಳಸುತ್ತಿದ್ದ. ಈ ನೆಲೆಯಲ್ಲಿ ದೇವರು ಭಕ್ತಿ, ಪೂಜೆ, ಪ್ರೀತಿ, ಧ್ಯಾನ, ಮುಕ್ತಿ ಮುಂತಾದ ಕರ್ಮಗಳು ಕಂಡುಬರುತ್ತವೆ. ಈ ಎಲ್ಲಾ ಕ್ರಿಯಾಧರ್ಮಗಳಿಗೂ ಮೂಲ

ಮಾನವನ ಇಂದ್ರಿಯಗಳು ಮತ್ತು ಅವನ ಮನೋವೃತ್ತಿಗಳು. ಇವುಗಳನ್ನೇ ಋಗ್ವೇದದಲ್ಲಿ ಅಧ್ಯಾತ್ಮ ನೆಲೆ ಎಂದು ಗುರುತಿಸಿವೆ.[೭]

ಮಲೆನಾಡಿನ ಮನೆಗಳ ಪ್ರಕೃತಿಯ ಮಡಿಲಲ್ಲಿ ಕುಳಿತಿರುವಾಗೇ ಭಾಸವಾಗುತ್ತವೆ. ಅಲ್ಲಿನ ಜನಜೀವನವೇ ಸುಖ, ಶಾಂತಿ, ನೆಮ್ಮದಿಯುಳ್ಳದ್ದು. ಈ ಜನರು ದುರಾಸೆ ರಹಿತರಾಗಿ ಸರಳ. ಸಜ್ಜನಿಕೆಯ ತೃಪ್ತ ಜೀವನ ನಡೆಸುತ್ತಿದ್ದಾರೆ. ಹಲವರು ಬುಡಕಟ್ಟು ಜನರ ಜೀವನ ಪ್ರಕೃತಿ ಸಿರಿಯ ಶ್ರೀಮಂತ ಬದುಕು. ಈ ಬದುಕಿನಲ್ಲಿ ಹಲವಾರು ಗ್ರಾಮೀಣ ಜನರು ಪಾಲುಪಡೆದಿದ್ದಾರೆ. ಇವರ ಬದುಕನ್ನು ಹಸನು ಮಾಡಲು ಪ್ರಕೃತಿಯೇ ಮುಂದೆ ಬಂದು ನಿಂತಿದೆ. ಮಾನವನ ಜೀವನ ದರ್ಶನವನ್ನು ಸುಪ್ತವಾಗಿ ಹುದುಗಿಸಿಕೊಂಡಿರುವುದು ಗಮನಾರ್ಹವಾದದು. ಇಂತಹ ಪರಿಸರದೊಳಗೆ ತಮ್ಮ ಬದುಕನ್ನು ಕಂಡುಕೊಂಡು ಬುಡಕಟ್ಟು ಗುಡ್ಡಗಾಡು ಜನ ಇಂದಿಗೂ ಪ್ರಕೃತಿ ಬಾಂಧವ್ಯಕ್ಕೆ ಬೆಸೆದುಕೊಂಡಿದ್ದಾರೆ.[೮]

ಪ್ರಕೃತಿಯ ಇಂತಹ ಸುಖಶಾಂತಿಯ ಅರಿವು ಮತ್ತು ಅನುಭವವಿಲ್ಲದವರು ನಾಗರಿಕರೆಂಬ ಪಟ್ಟತೊಟ್ಟು ನಗರ ಸಂಸ್ಕೃತಿಯ ಜನ ಎಂದು ಬಿಂಬಿಸುತ್ತಾರೆ. ಗ್ರಾಮೀಣ ಜನ ಬುಡಕಟ್ಟು, ಗುಡ್ಡಗಾಡು ಜನರೆಂದರೆ ತಾತ್ಸಾರ, ತಿರಸ್ಕಾರ. ಪ್ರಕೃತಿಯ ಗಿಡ, ಮರ, ಪ್ರಾಣಿ, ಪಕ್ಷಿ, ಸೂರ್ಯ, ಚಂದ್ರ, ಭೂಮಿಯೊಂದಿಗೆ ಅವಿನಾಭಾವ ಸಂಬಂಧ ಹೊಂದಿವೆ. ಈ ಜನರ ಪುರಾಣ, ಕಥೆ, ಕಾದಂಬರಿ, ಕಾವ್ಯ, ನೃತ್ಯಗಳು ಅವರ ಪ್ರಕೃತಿ ಸಂಸ್ಕೃತಿಯ ಸಮಾಜದ ಬಗ್ಗೆ ಒಂದು ಸ್ಪಷ್ಟ ಚಿತ್ರವನ್ನು ಕಟ್ಟಿಕೊಡುತ್ತವೆ.

ಉತ್ತರ ಕರ್ನಾಟಕದ ಪ್ರಮುಖ ಪರಿಸರ ಚಳವಳಿಗಳಲ್ಲಿ 'ಅಪ್ಪಿಕೋ ಚಳವಳಿ' ಎಲ್ಲರ ಗಮನಸೆಳೆದಿದೆ. ಈ ಚಳವಳಿ "ಸೆಪ್ಟೆಂಬರ್ ೬, ೧೯೮೩ರಲ್ಲಿ ಶಿರಸಿಯ ಆಚೆಗಿರುವ ಬಾಳೆಗದ್ದೆಯಲ್ಲಿ ನಡೆದು, ಅಲ್ಲಿಯ ಎಂಬ ಹಳ್ಳಿಯ ಜನ ಒಗ್ಗೂಡಿ ಅರಣ್ಯನಾಶದ ವಿರುದ್ಧ ಬಂಡೆದ್ದು ಬಂದರು. ಜನ ಬಂದು ಅರೆ ಕಡಿದ ಮರಗಳನ್ನು ತಬ್ಬಿನಿಂತು ಮರಕಟುಕರನ್ನು ಹಿಮ್ಮೆಟ್ಟಿಸಿದರು. ಅಂದು ದಕ್ಷಿಣ ಭಾರತದ ಇತಿಹಾಸದಲ್ಲಿ ಪ್ರಪ್ರಥಮವಾಗಿ 'ಚಿಪ್ಕೋ (ಅಪ್ಪಿಕೋ) ಚಳವಳಿ ನಾಂದಿಯಾಯಿತು. ಆನಂತರ ಕಾಳ್ಗಿಚ್ಚಿನಂತೆ ಈ ವಿಷಯ ಹರಡಿ ಸಿದ್ಧಾಪುರ ಸಾಗರ ತಾಲ್ಲೂಕುಗಳ ಹಳ್ಳಿಯ ಜನರು ಮತ್ತು ಉತ್ತರ ಕನ್ನಡ ಜಿಲ್ಲೆಯ ಸುತ್ತಮುತ್ತಲ ಜನರೆಲ್ಲ ಒಗ್ಗೂಡಿ ಅವರವರ ಅರಣ್ಯ ರಕ್ಷಣೆಗೆ ಪಣತೊಟ್ಟು ನಿಂತರು. ಜೊತೆಗೆ ಗುತ್ತಿಗೆದಾರರಿಗೆ ಮರಕಡಿಯಲು ಪರವಾನಿಗೆ ನೀಡುವುದನ್ನು ಮತ್ತು ಇದರಿಂದ ಮರಗಳ ಕಳ್ಳಸಾಗಣೆ ಮಾಡುವುದನ್ನು ತಡೆಯಲು ಸರ್ಕಾರಕ್ಕೆ ಒತ್ತಡ ತರುವುದು. ಜನಸಾಮಾನ್ಯರಿಗೆ ಗಿಡಮರಗಳ ಮಹತ್ವ ಮತ್ತು ಅವುಗಳನ್ನು ನೆಟ್ಟು ಬೆಳೆಸುವುದರ ಬಗ್ಗೆ ಅರಿವು ಮೂಡಿಸಿ ಪರಿಸರ ರಕ್ಷಣೆಯ ಪಣತೊಡುವುದು ಮುಂತಾದವು ಅಪ್ಪಿಕೋ ಚಳವಳಿಯ ಪ್ರಮುಖ ಉದ್ದೇಶವಾಗಿದೆ.

ಅಲ್ಲಿನ ಪ್ರತಿಯೊಬ್ಬರೂ "ನಾನು ನೆಟ್ಟು ನೀರು ಹೂದು ಸಾಕಿದ ಮರಗಳನ್ನು ನನ್ನ ಕಣ್ಮುಂದೇ ಕಡಿಯಲಿಕ್ಕೆ ನಾನು ಬಿಡುವುದಿಲ್ಲ. ನೀವು ಅವುಗಳನ್ನು ಕಡಿಯೋದಾದ್ರೆ ಮೊದ್ಲು ನನ್ನ ಕಡಿದು ಆ ಮೇಲೆ ನನ್ನ ಮರಗಳನ್ನು ಕಡಿದುಕೊಂಡುಹೋಗಿ"[೯] ಎಂದು ಮರಗಳನ್ನು ತಬ್ಬಿ ನಿಂತರು. ಆಕೆಯನ್ನು ಲೆಕ್ಕಿಸದೇ ಆ ತಾಯಿಯನ್ನು ಎಳೆದು ತಳ್ಳಿ ಮರಕಡಿದುರುಳಿಸುತ್ತಾರೆ. ಆ ಮರಗಳನ್ನು ಆಕೆ ತನ್ನ ಮಕ್ಕಳಿಗಿಂತ ಹೆಚ್ಚಾಗಿ ಬೆಳೆಸಿರುವುದು ಮತ್ತು ತನಗಿದ್ದ ಪರಿಸರ ಪ್ರಜ್ಞೆ, ಆ ಮರಗಳ ಜೊತೆಯಿದ್ದ ಒಂದು ಬಾಂಧವ್ಯ ನಮಗೆ ಸ್ಪಷ್ಟವಾಗಿ ಗೋಚರಿಸುತ್ತದೆ. ಅಷ್ಟೇ ಅಲ್ಲದೇ ಪರಿಸರದ ಯಾವುದೇ ಜೀವ ರಕ್ಷಣೆ ಪೋಷಣೆಗೆ ಹಾಗೂ ಯಾವುದೇ ಕಾರ್ಯಕ್ರಮಕ್ಕೆ ಒಂದು ಸಮೂಹದ ತಿಳಿವಳಿಕೆ ಪ್ರೀತಿಯ ಪ್ರಜ್ಞೆಯ ಜಾಗೃತಿ ಅತ್ಯಗತ್ಯ ಎಂಬುದು ಸ್ಪಷ್ಟವಾಗುತ್ತದೆ.

ಇಂತಹ ಚಳವಳಿ ಈ ಹಿಂದೆ ಪ್ರಸ್ತಾಪಿಸಿದ ೧೬ನೇ ಶತಮಾನದ ಅಮೃತದೇವಿಯಿಂದ ಆರಂಭವಾದ ಚಿಪ್ಕೊ ಚಳವಳಿ ೨೦ನೆಯ ಶತಮಾನದಲ್ಲಿ ಪುನರ್ಜನ್ಮ ಪಡೆದು ಚಾರಿತ್ರಿಕ ದಾಖಲೆ ನಿರ್ಮಿಸಿದೆ.

ಕ್ರಿಕೆಟ್ ದಾಂಡುಗಳನ್ನು ತಯಾರಿಸುವ ಅಲಹಾಬಾದ್ ಕಂಪನಿಯೊಂದು ಹತ್ತು ಬೂದಿಮರಗಳನ್ನು ಕಡಿಯಲೆಂದು ಹಿಮಾಲಯದ ಗೋಪೇಶ್ವರ ಎಂಬಲ್ಲಿಗೆ ಬಂದಾಗ ೧೯೭೩ರಲ್ಲಿ ಮಾರ್ಚ್ ತಿಂಗಳಲ್ಲಿ ವಿಶ್ವವಿಖ್ಯಾತ ಚಿಪ್ಕೋ ಆಂದೋಲನ ಪ್ರಾರಂಭವಾಯಿತು. ನಮ್ಮೂರ ಈ ಮರಗಳನ್ನು ಕಡಿಯಬೇಡಿರೆಂದು ಮಂಡಲ್ ಎಂಬ ಊರಿನ ಜನ ಕೇಳಿಕೊಂಡರೂ ಅವರು ಅದನ್ನು ಕೇಳದೆ ಸರ್ಕಾರ ಪರ್ಮಿಟ್ ಹಿಡಿದು ಬಂದಿದ್ದ ಕಂಪನಿ ಗುತ್ತಿಗೆದಾರ ಮರ ಕಡಿಯ ತೊಡಗಿದ. ಆಗ ಹಳ್ಳಿಯ ಜನರೆಲ್ಲ ಒಂದೊಂದು ಮರವನ್ನು ಅಪ್ಪಿನಿಂತು ಗುತ್ತಿಗೆದಾರರನ್ನು ಹಿಂದಿರುಗಿಸಿದರು. ಇದೇ ಗುತ್ತಿಗೆದಾರ ಮತ್ತೊಮ್ಮೆ ಪರ್ಮಿಟ್ ಪಡೆದು ಬೇರೆ ಕಡೆ ಮರ ಕಡಿಯಲು ಬಂದಾಗ ಹಲವು ಊರುಗಳ ಜನ ಒಂದಾಗಿ ಡೋಲು, ನಗಾರಿ, ಗಾನ, ಘೋಷಣೆಗಳೊಂದಿಗೆ ಮರ ಅಪ್ಪಿನಿಂತು ಜಯಪಡೆದರು.[೧೦]

ಈ ಯಾವ ವಿಷಯವನ್ನು ಅರಿಯದ ೫೦ರ ಅನಕ್ಷರಸ್ಥ ಮಹಿಳೆ ಗೌರವದೇವಿ ತನ್ನ ಜೋಶಿಮಠ ಎಂಬ ಊರಿನ ಹೆಂಗಸರನ್ನೆಲ್ಲ ಕಟ್ಟಿಕೊಂಡು ಇನ್ನೊಬ್ಬ ಅರಣ್ಯ ಗುತ್ತಿಗೆದಾರನ ಮರಕಟುಕರನ್ನು ಹಿಮ್ಮೆಟಿಸಿದಳು. ಬಂದ ಮಹಿಳೆಯರೆಲ್ಲ ನಿಂತು "ಈ ಅರಣ್ಯ ನಮ್ಮೆಲ್ಲರ ಅಮ್ಮನ ಮನೆ ಅದನ್ನು ಕೊನೆವರೆಗೂ ರಕ್ಷಿಸಬೇಕಾದದು ನಮ್ಮ ಹೊಣೆ" ಎಂದು ಘೋಷಣೆ ಕೂಗುತ್ತಿದ್ದರು. ಇಂತಹ ಅಹಿಂಸಾತ್ಮಕ ಚಳವಳಿ ತನ್ನ ಜಾಡು ಬದಲಿಸದೆ ದೇಶದಾದ್ಯಂತ ಹರಡಿ ಕರ್ನಾಟಕದಲ್ಲೂ ನೆಲೆಗೊಂಡಿತು. ಅದು ಶಿರಸಿಯ ಬಾಳೆಗದ್ದೆಯ ಜನರಿಂದ ಆರಂಭಗೊಂಡ ಅಪ್ಪಿಕೋ ಚಳವಳಿ ಇದರ ನಂತರವೇ ಕರ್ನಾಟಕ ಪಶ್ಚಿಮಘಟ್ಟಗಳನ್ನು

ಉಳಿಸಿ ಚಳವಳಿ ಆರಂಭಗೊಂಡಿತು. ಇಲ್ಲಿಯ ಹೋರಾಟಕ್ಕೆ ಚಿಪ್ಕೋ ಖ್ಯಾತಿಯ ಸುಂದರಲಾಲ್ ಬಹುಗುಣ ಅವರು ಬಂದು ಸ್ಫೂರ್ತಿಯಾಯಿತು.

ಈ ರೀತಿಯಾಗಿ ಮಾನವನಿಗೂ ಮತ್ತು ಪರಿಸರಕ್ಕೂ ಒಂದು ನಿಕಟವಾದ ಸಂಬಂಧವಿತ್ತು. ಪರಿಸರ ಸಂರಕ್ಷಣೆಯ ಕಾಳಜಿ ಬಗ್ಗೆ ಅರಿವನ್ನು ಹೊಂದಿದ್ದರೂ ಪರಿಸರ ಪೋಷಣೆಯೇ ನಮ್ಮೆಲ್ಲರ ಕರ್ತವ್ಯ ಎಂದು ತಿಳಿದಿದ್ದರು.[೧೧]

## ೪.೩. ಪ್ರಕೃತಿಯ ಸೌಂದರ್ಯ ಮತ್ತು ಕ್ರೌರ್ಯ

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ನಿಸರ್ಗದ ವರ್ಣನೆ ಯಥೇಚ್ಛವಾಗಿರುವುದು ಕಂಡುಬರುತ್ತದೆ. ನಮ್ಮ ಕವಿಗಳು ಅಲೆಅಲೆಯಾಗಿ ಹೊಮ್ಮುವ ಪ್ರಕೃತಿ ಸೌಂದರ್ಯದ ಸಾಗರದಾಳಕ್ಕೆ ಮುಳುಗಿ ರಸಾನುಭವವನ್ನು ಪಡೆದಿದ್ದಾರೆ. ಅವರಿಗೆ ಈ ಒಂದು ಅನುಭವ ಇಂದ್ರಿಯಾನುಭವವಾಗಿರದೆ ಅಧ್ಯಾತ್ಮದ ಔನ್ನತ್ಯಕ್ಕೇರುವ ಸ್ವರ್ಣ ಸೋಪಾನವೂ ಆಗಿದೆ ಎನ್ನಬಹುದು.

ಪ್ರಕೃತಿಯ ಒಂದು ಮುಖ ಸುಕೋಮಲವೂ, ಲಲಿತ ಮೋಹಕವೂ, ಮಂಗಳಕರವೂ ಆದ ರಮಣೀಯ ಸೌಂದರ್ಯವಾಗಿದ್ದರೆ, ಇನ್ನೊಂದು ಮುಖ ಭಯಾನಕವೂ, ಹಿಂಸಾತ್ಮಕವೂ, ವಿನಾಶಕವೂ ಆದ ಅಸಹನೀಯ ಕ್ರೌರ್ಯದ್ದು. ಪ್ರಕೃತಿಯ ಮೂಲ ಸ್ಥಿತಿ ಎಂದರೆ ಹಿಂಸೆ ಮತ್ತು ಪ್ರೀತಿ ಅಥವಾ ಆನಂದ ಮತ್ತು ದುಃಖವನ್ನು ಕೊಡುವುದು. ಪ್ರಕೃತಿಯ ಸೌಂದರ್ಯಕ್ಕೂ ಸಹ ಈ ಮಾತು ಅನ್ವಯಿಸುತ್ತದೆ. ಪ್ರಕೃತಿಯ ವಿನಾಶಕರ ಹೆಜ್ಜೆಗಳು ರುದ್ರ ರಮಣೀಯ ನಾಟಕದ ಒಂದು ಅಂಗವಾಗಿ ತೋರುತ್ತವೆ.

ಜಿ.ಎಸ್.ಶಿವರುದ್ರಪ್ಪ ಅವರು ಹೀಗೆ ಪರಿಭಾವಿಸಿದ್ದಾರೆ. "ಸೌಂದರ್ಯನುಭವವೆಂದರೆ ಕೇವಲ ಆಹ್ಲಾದಕಾರಿಯಾದ, ಸಂತೋಷಕಾರಿಯಾದ ಅನುಭವ ಎಂದಲ್ಲ, ಹರ್ಷವಾಗಲೀ ಶೋಕವಾಗಲೀ ಏನೇ ಆಗಲಿ ರಸತ್ವಕ್ಕೇರಿದರೆ ಅದು ಸೌಂದರ್ಯನುಭವವೇ. ಪ್ರಕೃತಿಯ ಸೌಂದರ್ಯ ಮತ್ತು ಕ್ರೌರ್ಯ ಒಂದು ನಾಣ್ಯದ ಎರಡು ಮುಖಗಳಾಗಿವೆ".[೧೨]

ಪ್ರಕೃತಿ ಕವಿ ಪ್ರಜ್ಞೆಯನ್ನು ಮೊದಲು ಆಕರ್ಷಿಸುವುದು ತನ್ನ ವೈಭವಯುಕ್ತವೂ, ವೈವಿಧ್ಯಪೂರ್ಣವೂ ಆಗಿರುವ ಸೌಂದರ್ಯದಿಂದ ಪರಿಸರದ ನಾನಾ ಭಂಗಿಯ ವರ್ಣಮಯನರ್ತನ ಕವಿಯ ಚೇತನವನ್ನು ಸೆಳೆಯುತ್ತವೆ. ಅವನಿಗೆ ಬಹಿರ್ಮುಖಿಯಾಗಿ ಮತ್ತು ಅಂತರ್ಮುಖಿಯಾಗಿ ಬಹಿರಂಗದ ಸೌಂದರ್ಯದ ಆಕರ್ಷಣೆಗೆ ಅವನು ಒಳಗಾಗುತ್ತಾನೆ. ಪ್ರಕೃತಿಯ ಅದ್ಭುತ ಶಕ್ತಿ, ಅದ್ಭುತ ರಚನಾ ಕೌಶಲ ಅನಿರ್ವಚನೀಯವಾದ ಮಹೋದ್ದೇಶ, ಅಚಿಂತ್ಯವಾದ ಪರಮ ಪುರುಷಾರ್ಥ ಇತ್ಯಾದಿಗಳ ಮನದಿಂದ ಧ್ಯಾನ

ಗೋಚರವಾಗುವ ಅದರ ರೂಪ. ಅದರ ಸ್ವರೂಪ ಸತ್ಯವನ್ನೇ ಪರಿವರ್ತನೆಗೊಳಿಸುತ್ತದೆ. ಪ್ರಕೃತಿ ಕವಿ ಪ್ರಜ್ಞೆಗೆ ಆ ಸತ್ಯ ಮುಖಗಳನ್ನು ಒಳಗೊಳ್ಳುವ ಬ್ರಹ್ಮಮಯಿಯಾಗಿ ಆನಂದಮಯಿಯಾಗಿ ಗೋಚರಿಸುತ್ತಾಳೆ.

ಪ್ರಕೃತಿಯ ಸೌಂದರ್ಯಾನುಭವದಲ್ಲಿ ಬೆಳೆದ ಕವಿಯ ಮನಸ್ಸಿನ ಹಂತಗಳನ್ನು ಕುವೆಂಪು ವರ್ಣಿಸುತ್ತಾರೆ. ಸಮಕಾಲೀನ ಸಾಹಿತ್ಯದಲ್ಲಿ ಬೇರೆಲ್ಲ ಪ್ರಕಾರಗಳಿಗಿಂತ ಪ್ರಕೃತಿ ಮತ್ತು ಅದರ ಸೌಂದರ್ಯವನ್ನೇ ಕುರಿತು ಗೀತೆಗಳು ವಿಶೇಷವಾಗಿ ರಚನೆಯಾಗಿವೆ. ಆದರೆ ಪ್ರಸ್ತುತ ಇವತ್ತಿನ ಪರಿಸರ ದುಃಸ್ಥಿತಿಯನ್ನೊಳಗೊಂಡ ಹಿನ್ನೆಲೆಯಲ್ಲಿ ಪರಿಸರ ತಿಳಿವಳಿಕೆ ಕಾಳಜಿಗಳನ್ನು ಸಮಾಜದ ಜನರಲ್ಲಿ ಉದ್ದೀಪನಗೊಳಿಸುವಂತಹ ಸಾಹಿತ್ಯ ಕೃತಿಗಳು ಮುಖ್ಯವಾಗಿವೆ. ಸಾಮಾಜಿಕ ಪರಿಸರದೊಳಗೆ ಪ್ರಾಕೃತಿಕ ಪರಿಸರದ ಸಸ್ಯ, ಪ್ರಾಣಿ, ಪಕ್ಷಿ ಮುಂತಾದ ಜೀವಗಳನ್ನು ಪ್ರಧಾನವಾಗಿರಿಸಿಕೊಂಡು ರಚನೆಯಾದ ಸಾಹಿತ್ಯ ಪ್ರಮುಖವಾದದು.

ಜಾಗತೀಕರಣ ಹೇಳುವ 'ವಿಶ್ವಗ್ರಾಮ'ವನ್ನು ಸಾಧಿಸಿದ ಮಾತ್ರಕ್ಕೆ ವಿಶ್ವಮಾನವರಾಗಲು ಸಾಧ್ಯವಿಲ್ಲ. ದಿನೇ ದಿನೇ ಹೆಚ್ಚುತ್ತಿರುವ ಸೈಬರ್ ಅಪರಾಧಗಳು ಮತ್ತು ಸೈಬರ್ ಪೊಲೀಸ್ ಪಡೆ ಸೈಬರೀಕರಣದ ವಿಕೃತ್ತಿಗೆ ಮತ್ತೊಂದು ನಿದರ್ಶನವಾಗಿದೆ. ವಾಣಿಜ್ಯೋದ್ದೇಶಗಳಿಗೆ ಬದ್ಧವಾದ ಆಧುನಿಕ ಮಾಹಿತಿ ತಂತ್ರಜ್ಞಾನವು ಸಹಜವಾಗಿಯೇ ಮುಖನೋಡಿ ಮಣೆ ಹಾಕುವ ತೋರಿಕೆಯನ್ನು ವೈಭವೀಕರಿಸುವ ಅಪಾಯಗಳನ್ನೇ ಬಿಂಬಿಸುತ್ತಿರುತ್ತದೆ.

ಆದರೆ ವಿಶ್ವಮಾನವತ್ವವು ಎಲ್ಲ ಬಗೆಯ ಕೃತಕ ವಿಭಜನೆಗಳನ್ನು ಮಾನವ ನಿರ್ಮಿತ ಶ್ರೇಣೀಕರಣವನ್ನು ನಿರಾಕರಿಸುತ್ತದೆ. ರಾಮಕಿರೀಟದಲ್ಲಿರುವ ರತ್ನಮಣಿ ಮತ್ತು ತೃಣಸುಂದರಿಯ ಮೂಗುತಿಯಂತಿರುವ ಹಿಮಮಣಿ ಎರಡನ್ನೂ ಸರಿಸಮಾನವಾಗಿ ಕಾಣುವ ಕುವೆಂಪು ವಾಣಿಯನ್ನು ಇಲ್ಲಿ ಸ್ಮರಿಸಬಹುದು. ಹಾಗೂ ಶ್ರೀ ರಾಮಾಯಣದರ್ಶನಂ ಮಹಾಕಾವ್ಯದಲ್ಲಿ ದಶರಥನ ಪುತ್ರ ಕಾಮೇಷ್ಟಿಯಾಗಕ್ಕೆ ಬರುವ ಜನಸಾಗರದ ಸಾಲುಗಳನ್ನು ವರ್ಣಿಸುತ್ತಾ ಮಳೆಗಾಲದಲ್ಲಿ ಹುತ್ತದ ಜೇನು ಹುಡುಕುತ್ತಾ ಹೊರಟ ಕಟ್ಟಿರುವೆಯ ಸಾಲುಗಳಿಗೆ ಹೋಲಿಸಿದ್ದಾರೆ. ಕುವೆಂಪು ಸಾಹಿತ್ಯದಲ್ಲಿ ಕೇವಲ ಮನುಷ್ಯ ಕಾಣುವುದಿಲ್ಲ. ಇರುವೆಯಿಂದ ಹಿಡಿದು ಮನುಷ್ಯನವರೆಗೂ ಸಮಸ್ತ ಜೈವಿಕ ಜಗತ್ತೊಂದು ಅನಾವರಣಗೊಳ್ಳುತ್ತದೆ. ಇದೇ ಕುವೆಂಪು ಅವರ ಸಾಹಿತ್ಯದ ವೈಶಿಷ್ಟ್ಯ.

ಪ್ರಕೃತಿ ಮತ್ತು ಮನುಷ್ಯನನ್ನು ಕವಿ ತಾಯಿ ಮಗನ ಸಂಬಂಧಕ್ಕೆ ಹೋಲಿಸುತ್ತಾನೆ. ಪರಿಸರದಲ್ಲಿ ಒಂದು ಗುಡ್ಡೆಯನ್ನು ಕಂಡಾಗ ಭೂಮಿ ತಾಯಿ, ಹಾಲುಣಿಸಲು ತನ್ನ ಎದೆ ತೆರೆದು ಮಲಗಿದ್ದಾಳೆಯೇ? ಎಂಬ ಕಲ್ಪನೆ ಕವಿಯ ಮನದಲ್ಲಿ ಮೂಡುತ್ತದೆ. ವೃಕ್ಷ್ವಗಿರಿಯ ಉನ್ನತ ಶಿಖರಗಳು ಮೋಡಗಳ ರುಮಾಲು ಸುತ್ತಿಕೊಂಡಿದ್ದು "ಒಳಗೆ ಬಾ" ಎಂದು

ಕರೆಯುತ್ತಿದ್ದವು ಎಂಬ ಭಾವನೆ ಬರುತ್ತಿದ್ದವು. "ಆಗ ತಾನೇ ಮೂಡಿಬಂದಿದ್ದ ಸೂರ್ಯ ದಟ್ಟೈಸಿದ ಹಿಮದ ಹಿನ್ನೆಲೆಯಲ್ಲಿ ಶಾಂತಿಹೀನವಾಗಿ ಬಿಳಿಚಿಕೊಂಡು ಚಂದ್ರವಾಗಿ ರೂಪಾಂತರ ಹೊಂದಿದ್ದ. ಅರಣ್ಯದಲ್ಲಿ ಕವಿಗಳ ಜೊತೆಯಲ್ಲಿಯೇ ಚಲಿಸುತ್ತಿರುವ ಮೇಘಗಳು. ಹಸಿರು ಕಾನನದ ಮೇಲೆ ಹಾರುತ್ತ ಗಂಧರ್ವಲೋಕದ ಭ್ರಮೆಯನ್ನು ಉಂಟುಮಾಡುತ್ತಿದ್ದವು. ಪರಿಸರದಲ್ಲಿ ತುಂಬಿತುಳುಕುತ್ತಿರುವ ಹಚ್ಚಹಸಿರಿನಿಂದ ಕಂಗೊಳಿಸುತ್ತಿರುವುದನ್ನು ಕವಿ ತನ್ನ ಪೂರ್ಣದೃಷ್ಟಿಯಿಂದ ವರ್ಣಿಸುತ್ತ ತನಗಾದ ಅನುಭವವನ್ನು ಬರವಣಿಗೆಯ ಮೂಲಕ ವ್ಯಕ್ತಪಡಿಸುತ್ತಾ ಹೋಗುತ್ತಾನೆ"[೧೩]

ವಾಸ್ತವವಾಗಿ ಮನುಷ್ಯ ಬಣ್ಣದ ಬದುಕಿಗೆ ಮಾರುಹೋಗುತ್ತಿರುವ ಅವನ ವನಪ್ರವೃತ್ತಿಯ ಮೂಲ ಪ್ರೇರಣೆ ಪ್ರಕೃತಿಯೇ ಆಗಿದೆ. ಹೇಗೆಂದರೆ ಪ್ರಕೃತಿಯಲ್ಲಿ ಗಿಡಮರಗಳು ಬಿಡುವ ಬಣ್ಣಬಣ್ಣದ ಹೂವು ಮತ್ತು ಅವುಗಳ ಸುಗಂಧಕ್ಕೆ ಮನಸೋಲದ ಮನುಷ್ಯನಿರಲಿ ಪ್ರಾಣಿ, ಪಕ್ಷಿ, ಕೀಟಾದಿಗಳು ಇಲ್ಲ. ಹೂವುಗಳು ಕೇವಲ ಸೌಂದರ್ಯ ಸುಗಂಧಕ್ಕೆ ಮಾತ್ರವಲ್ಲದೆ ಆಹಾರವಾಗಿಯೂ ಕೆಲವು ಜಾತಿಯ ಗಿಡಮರಗಳು, ಹೂವುಗಳು ಮಹತ್ವ ಪಡೆದಿವೆ. ಅಷ್ಟೇ ಅಲ್ಲ ಕೆಲವು ಕ್ರಿಮಿ ಕೀಟಗಳ ಪ್ರಾಣಹೀರುವ ಹೂವುಗಳು ಇವೆ.

ಈ ಹೂ ಗಿಡಗಳು ಪ್ರಸ್ತಾಪ ಪ್ರಾಚೀನ ಸಾಹಿತ್ಯದಿಂದ ಆಧುನಿಕ ಕನ್ನಡ ಸಾಹಿತ್ಯಗಳವರೆಗೆ ಸಾಗಿ ಬಂದಿದೆ. ಪಂಪ–ಹರಿಹರನಿಂದ ಹಿಡಿದು ಮಧ್ಯಕಾಲದ ಶೈವ ಮತ್ತು ವೈಷ್ಣವ ಕನ್ನಡ ತಮಿಳು ಎಲ್ಲಾ ಸಾಹಿತ್ಯದಲ್ಲಿಯೂ ಗಿಡಮರಹೂಗಳ ಹೆಸರು ಸಿಗುತ್ತವೆ. ಈ ಎಲ್ಲಾ ಪ್ರಾಚೀನ ಸಾಹಿತ್ಯದ ಕವಿಗಳು ತಾವು ಕಂಡ ಕಾಡಿನ ಹೂಗಿಡಗಳ ಸೌಂದರ್ಯ ಮತ್ತು ಅವುಗಳ ಮಹತ್ವ ದಾಖಲಿಸಿದ್ದಾರೆ. ಕವಿಗೆ ಬಿಸಿಲು, ಬಾನು, ಕಾಡುಗಳಿಲ್ಲ, ಹೂವುಗಳನ್ನೇ ಬಳಸಿಕೊಂಡು ಅವರು ಗಿರಿ ಕಾನನಗಳ ಹೂವುಗಳನ್ನು ಕುರಿತು ವರ್ಣಿಸುತ್ತಾರೆ. ಕವಿಗೆ ವನ ಉಯ್ಯಾಲೆಯಾಗಿ ಅದು ಹೂವಿನ ತೊಟ್ಟಿಲಾಗಿದೆ. ಗಿರಿ ಶಿಖರಗಳ ತಪ್ಪಲು ಪ್ರಕೃತಿ ಸೌಂದರ್ಯದ ತಾಣಗಲಾಗಿವೆ. ವನ, ಪುಷ್ಪ, ಗಿರಿ ಶೀಕರಗಳಿಂದ ಸಿಕ್ಕ ಈ ಅನುಭವ ಕವಿಯದು. ಕಾಡಿನ ಅಸಂಖ್ಯ ಹೂವುಗಳಲ್ಲಿ ಕೆಲವು ಆಕರ್ಷಣೆಯಾಗಿದ್ದು ಅದು ಹಲವು ಕವಿಗಳ ಭಾವನೆ ಕಲ್ಪನೆಗಳಿಗೆ ನಾಂದಿಯಾಗಿವೆ. ಅಷ್ಟೇ ಅಲ್ಲ ಇವೆಲ್ಲ ಮನುಷ್ಯನ ದುಃಖಗಳನ್ನು ನಿವಾರಣೆ ಮಾಡಿ ಸುಖ ಶಾಂತಿ ನೆಮ್ಮದಿ ಸಂತೋಷವನ್ನು ತರುತ್ತದೆ. ಪಂಪ ತನ್ನ ಪ್ರತಿಭಾಶಕ್ತಿಯಿಂದ ಹರಿಯುವ ಹೊಳೆಯ ಚಿತ್ರಣವನ್ನು ದರ್ಶಿಸಿರುವುದು ಅದ್ಭುತವಾದದು.

**"ಕೊಂಕಿದ ಕೊಂಕು ತದ್ವಿಷಯ ಕಾಂತೆಯ ಪುರ್ವಿನ ಕೊಂಕಿನಂತೆ ಚೆ**

**ಲ್ವಕುಡೆ, ತಟ್ಟೆರಟೆ ತಡಿಯ ಪೂಮರದಿಂ ಕಟುವೂಗಳತ್ತಮಿ**

ತ್ತಂ ಕವಿಯಲ್ಲಿ ಮೆಲ್ಲನುಗೆ, ತೇಂಕುವ ಪೂವಿನ ಸಂಕರಂಗಳಂ
ನೂಕುವುವೂರ್ಮಿಮಾಲಿನಿಯ ತುಂಗ ತರತ್ತರಳೋರ್ಮಿಮಾಲೆಗಳ್"

(ಆದಿಪುರಾಣ ೧-೬೧)

ನದಿ ಅರ್ಧ ಚಂದ್ರಾಕಾರದ ತಿರುವಿನಲ್ಲಿ ಹರಿಯುತ್ತಿದೆ. ನದಿಯ ಎರಡು ಇಕ್ಕೆಲಗಳಲ್ಲಿ ಸೋಂಪಾಗಿ ಬೆಳೆದು ನಿಂತಿರುವ ಗಿಡಮರಗಳ ಸಾಲು ಆ ಮರಗಳ ತುಂಬಾ ಬಣ್ಣ ಬಣ್ಣ ಹೂವು ಅರಳಿ ರಾಶಿ ರಾಶಿಯಾಗಿ ನೀರಿಗೆ ಉದುರುತ್ತಿವೆ. ಹರಿಯುತ್ತಿರುವ ಹೊಳೆಯ ತರಂಗ ಮೇಲೆ ಬಿದ್ದು ತೇಲುವ ಹೂವಿನ ರಾಶಿಯನ್ನು ನೂಕುತ್ತಾ ಸಾಗಿವೆ. ಬಾಗಿದ ಹೊಳೆಯ ಸುಂದರ ನೋಟ ಆ ನಾಡಿನ ಆದಿದೇವತೆಯ ಕೊಂಕಿನ ಹುಟ್ಟಿನಂತೆ ತೋರಿತು ಎನ್ನುವ ಕವಿ. ಇಡೀ ದೃಶ್ಯವನ್ನು ಕಣ್ಣಮುಂದೆ ತಂದು ನಿಲ್ಲಿಸಿದ್ದಾನೆ. ಆ ಹೊಳೆ ಆ ತರಂಗ, ಆ ಹೂವು ಎಲ್ಲವೂ ಸೇರಿ ಒಂದು ಅದ್ಭುತ ಕಲ್ಪನೆಯನ್ನು ರೂಪಕವಾಗಿ ನೀಡಿರುವ ಕವಿ ಪ್ರತಿಭಾಶಕ್ತಿ ನಮ್ಮನ್ನು ಪುಳಕಗೊಳಿಸುತ್ತದೆ.

ನವೋದಯ ಕಾಲಕ್ಕೆ ಬಂದರೆ ಆಗಿನ ಕವಿಗಳಿಗೆ ಪ್ರಕೃತಿಯ ಅನುಸಂಧಾನ ಕೇವಲ ರಸಸ್ವಾದನೆಯಾಗಿದೆ. ಉಪಾಸನೆಯೂ ಆಗಿದ್ದದು ವಿಶೇಷ ನವೋದಯ ಕವಿಗಳಲ್ಲಿ ಪ್ರಕೃತಿಯ ಸೌಂದರ್ಯ ಕೋಮಲವಾಗಿ ಪ್ರಜ್ವಲಿಸುತ್ತದೆ.

ಜಿ.ಎಸ್.ಶಿವರುದ್ರಪ್ಪನವರು 'ಒಂದು ಬೆಳಗು' ಎಂಬ ಕವನದಲ್ಲಿ ಸೂರ್ಯೋದಯ ಸೊಬಗನ್ನು ತುಂಬಾ ಸೊಗಸಾಗಿ ಕಟ್ಟಿಕೊಟ್ಟಿರುವುದನ್ನು ಇಲ್ಲಿ ಕಾಣಬಹುದು.

"ಉದಯಗಿರಿ ಶಿವಕರುಣೆ ಮೋಡಗಳ ಕೊತ್ತಳಕೆ
ಮೊದಲ ಬೆಳಕಿನ ಚೆಲುವ ಧ್ವಜವ ನೆಟ್ಟು
ಗಿರಿ ಶಿಖರದ ಮರಮರದ ತಳಿರ ತುಟಿಯೊಳು ತನ್ನ
ಅನುರಾಗವಿಟ್ಟು
ಬರುತಿಹುದು ನೋಡದೋ ಕೊಳ ಚರಂಡಿಯ ಜಿಲಕು
ಬಂಗಾರಗಳ ಬದುಕು ದಾನಕೊಟ್ಟು

ಬಂದ ಮಂದಾನಿಲಯ ಮಿದು ಬೆರಳು ನೇವರಿಸಿತ್ತು
ಕಾತರದಿ ಕಾಯುತಿಹ ತರುಲತೆಯ ತಲೆ ನವಿರ
ಬಲುನಲ್ಮೆಯಿಂದ
ಹಕ್ಕಿ ಚಿಲಿಪಿಲಿದನಿಗೆ ಮರಮರದ ಎದೆಯಾಯ್ತು
ಭವಪೂರಿತ ಕವಿಯ ಮನಸಿನಂದ!"

ಮೋಡಗಳ ಕೋಟೆಯ ಮೇಲೆ ಉದಯಗಿರಿಯ ಶಿವಶರಣೆ ತನ್ನ ಮೊದಲ ಚೆಲುವನ ಧ್ವಜವನ್ನು ನೆಟ್ಟು, ಬೆಟ್ಟಗುಡ್ಡದ ಮರಮರದ ಚಿಗುರಿನಲ್ಲಿ ತನ್ನ ಅನುರಾಗವನ್ನಿಟ್ಟು

ಬರುತಿಹುದು ಎಂದು ಕವಿ ಸೂರ್ಯೋದಯ ಚೆಲುವನ್ನು ಮನೋಹರವಾದ ರೀತಿಯಲ್ಲಿ ಬಣ್ಣಿಸಿದ್ದಾರೆ. ಹಾಗೆಯೇ ಪ್ರಕೃತಿಯಲ್ಲಿ ಕಂಡುಬರುವ ಹಿಂಸೆಯನ್ನು ಪ್ರಧಾನವಾಗಿ ವರ್ಣಿಸಿರುವ ಕವಿತೆ 'ಜಡವಾದಿ'ಯೊಬ್ಬ ಭೂಮಿಯ ಸಂಕಷ್ಟದ ಬದುಕನ್ನು ವರ್ಣಿಸುತ್ತ ಹೋಗುವಂತೆ ನಿರೂಪಿಸಲಾಗಿದೆ.

**"ಎಲೆ ಭೂಮಿ ರಾಣಿ**
**ನೀನಳು ಹೊರೆ ಹೊರುವ**
**ಬರಿ ದೊಡ್ಡ ದೋಣಿ**
**ತಾಯಂತೆ ತಾಯಂತೆ"**

ಹೀಗೆ ಭೂಮಿಯನ್ನು ಗೇಲಿ ಮಾಡುತ್ತಾ ಜಡವಾದಿಯ ಮೂಲಕ ಪ್ರಕೃತಿಯ ಕ್ರೌರ್ಯದ ಕಡೆ ಕವಿ ಗಮನಹರಿಸುತ್ತಾರೆ.

**"ಸವಿಗನಸುಗಳು ಸಿಡಿದು**
**ಜಾಲಾಗುತಿರಲಿ**
**ಹಗಲಿರುಳು ಉರುಳುರುಳು**
**ಓ ಭೂಮಿ ರಾಕ್ಷಸಿಯೇ"** **(ಜಿ.ಎಸ್.ಎಸ್. ಸೌಂದರ್ಯ ಸಮೀಕ್ಷೆ, ಪು. ೨೭)**

ದಾಸಿಯಾದ ವಸುಂಧರೆ ಸುಮ್ಮನೆ ಉರುಳುತ್ತಾ ಹೋಗುತ್ತಾಳೆ. ಇತಿಹಾಸದಲ್ಲಿ ನಡೆದಂತಹ ಕ್ರೂರ ಘಟನೆಗಳನ್ನು ತನ್ನೊಳಗೆ ಅಡಗಿಸಿಕೊಂಡಿರುವ ಧರೆಯ ಒಡಲಲ್ಲಿ ಬೃಹತ್ ಸ್ಮಶಾನವೇ ಅಡಗಿದೆ ಎಂದು 'ಜಡವಾದಿ' ಘೋಷಿಸುತ್ತಾನೆ. ಇಲ್ಲಿ ಭೂಮಿಯು ಸಂಪೂರ್ಣವಾಗಿ ಹಿಂಸೆ, ಕ್ರೌರ್ಯದಿಂದ ಕೂಡಿದ್ದು ಎನ್ನುವ ದೃಷ್ಟಿಕೋನವಿದೆ. ಹೀಗೆ ಕನ್ನಡ ಸಾಹಿತ್ಯದಲ್ಲಿ ಪ್ರಕೃತಿಯ ಸೌಂದರ್ಯ ಮತ್ತು ಕ್ರೌರ್ಯಗಳೆರಡನ್ನು ಸಹ ಬಿಂಬಿಸಿರುವುದನ್ನು ಕಾಣಬಹುದು. ಪ್ರಕೃತಿಯಲ್ಲಿ ಹೂವುಗಳು ಮಕರಂದದಂತೆ ಹೂವುಗಳು ಹಲವು ಕ್ರಿಮಿ-ಕೀಟ-ದುಂಬಿಗಳ ಜೀವಕ್ಕೆ ಪೂರಕವಾದ ಆಹಾರವಾದರೆ ದುಂಬಿಗಳ ಜೀವ ರಕ್ಷಿಸುವ ಕೆಲವು ಹೂವುಗಳು ಪ್ರಾಣಹೀರುತ್ತವೆ. ಅವುಗಳಲ್ಲಿ ಪಿಚ್ಚರ್ ಮುಂತಾದ ಹೂವುಗಳು ಈ ವಿಶಿಷ್ಟ ಗುಣ ಹೊಂದಿವೆ. ಇವುಗಳು ತಮ್ಮ ಸುವಾಸನೆಯಿಂದಲೇ ಕ್ರಿಮಿಕೀಟಗಳನ್ನು ಸೆಳೆದು ಕುಳಿತ ಕೀಟಗಳನ್ನು ಹೂವಿನ ಪಕಳೆಗಳಿಂದ ಅಥವಾ ಅಂಟುದ್ರವದಿಂದ ಬಂಧಿಸಿ ಜೀವದ್ರವ ಹೀರಿ ಪ್ರಾಣ ತೆಗೆದುಬಿಡುತ್ತವೆ. ಇವೆಲ್ಲ ಸಸ್ಯ ಸಂಸ್ಕೃತಿಯ ಕೆಲವು ಕ್ರಿಯಾಗುಣಗಳು. ಇದು ಡ್ರಸಿರಾ ಹೂವಿನ ಕ್ರಿಯೆಯನ್ನು ನೋಡಬಹುದು.

**ಅಹಂಕಾರಿ ನೊಣಗಳ**
**ಹಾಡು ಪಾಡು**

ಬದುಕುಳಿದರೆ ತಾನೆ
ಕುಳಿತೊಡನೆ ಕೊರಳಿದು
ದಿಗ್ಬಂದಿ ರಕ್ತ ಒಸರುತ್ತದೆ
ಡೇಲಿಯಾ ಹೂವು

ಪ್ರಕೃತಿಯ ಅಸಾಮಾನ್ಯ ಜೀವ ಸೃಷ್ಟಿಗಳಲ್ಲಿ ಪ್ರಕೃತಿಯೇ ತನ್ನ ಸಮತೋಲನ ಸ್ಥಿತಿಗೆ ತನ್ನಲ್ಲೇ ಸೃಷ್ಟಿಸಿಕೊಂಡು ಜೀವಹಾನಿಯ ಬಿಂದುಗಳಲ್ಲಿ ಡೇಲಿಯಾ ಹೂವುಗಳಂತಹ ಗುಲಾಬಿ ಬಿಂದು ಅವುಗಳು ಜೀವಹಾನಿ ಮಾಡುತ್ತವೆ ಎಂಬುದನ್ನು ನಂಬುವುದು ಕಷ್ಟ. ಆದರೆ ಪ್ರಕೃತಿಯ ಸೂಕ್ಷ್ಮತೆ ಅರಿತಾಗ ಅದರ ಮರ್ಮ ಅರ್ಥವಾಗುತ್ತದೆ. ಗಟ್ಟಿತನದಲ್ಲಿ ಮೃದುವಿರುತ್ತದೆ ಎಂಬುದನ್ನು ಪ್ರಕೃತಿಯೇ ದೇವರು ದೈವೀಭಾವವೇ ಅಧ್ಯಾತ್ಮ. ಈ ಅಧ್ಯಾತ್ಮ ಬುದ್ಧಿಗಿಂತ ಪ್ರಧಾನವಾದದ್ದು ಎಂಬುದನ್ನು ಹಿಂದೆ ಪರಿಶೀಲಿಸಿದಂತೆ ಮೃದುತ್ವದಲ್ಲಿಯೂ ಗಟ್ಟಿತನದ ಕ್ರೌರ್ಯವಿರುವುದನ್ನು ನಾವು ಗಮನಿಸಬಹುದು.

ಪ್ರಾಣಿಗಳ ಈ ಸೂಕ್ಷ್ಮತೆ ಚುರುಕುತನ, ಶಕ್ತಿ ಸಾಮರ್ಥ್ಯಗಳು ಮಾನವನ ಗ್ರಹಿಕೆಗೆ ಸಿಕ್ಕಮೇಲೆ ಅವುಗಳ ಉಪಯೋಗವನ್ನು ಇದನ್ನು ಬೇರೆ ಬೇರೆ ರೀತಿಯಲ್ಲಿ ತನ್ನ ಉಪಯೋಗಗಳಿಗೆ ಅನುಗುಣವಾಗಿ ಬಳಸಿಕೊಂಡು ಪಳಗಿಸಿದ್ದಾನೆ. ಇದನ್ನು ಬೇಟೆ, ಆಟ, ಜೂಜು ಮುಂತಾದ ಮಾನವ ಕ್ರಿಯೆಗಳಿಂದ ಗಮನಿಸಬಹುದು. ಈ ಪ್ರವೃತ್ತಿಯಿಂದ ಇವನು ತಮ್ಮ ತಮ್ಮವರಲ್ಲೇ ವೈಷಮ್ಯ ಬೆಳೆಸುವ ಕಾರ್ಯಕರ್ಮಗಳನ್ನು ಹಿಂಸೆ, ಶಿಕ್ಷೆಗಳಿಂದ ಅದನ್ನು ಪಳಗಿಸಿ ಪ್ರಾಣಿ ಪ್ರಾಣಿಗಳ ನಡುವೆ ಕ್ರೌರ್ಯ, ಹಿಂಸೆಗಳನ್ನು ಪ್ರಚೋದಿಸಿ ಕೆಲವು ಪ್ರಾಣಿಗಳ ನಾಶಕ್ಕೆ ಕಾರಣನಾಗಿದ್ದಾನೆ. ಈ ರೀತಿಯಲ್ಲಿ ಮಾನವನ ತಂತ್ರಕ್ಕೆ ಬಲಿಯಾಗುವ ಪ್ರಾಣಿಗಳ ಪ್ರಸಂಗ ಹಲವಾರಿವೆ.

'ಮಲೆಗಳಲ್ಲಿ ಮದುಮಗಳು' ಕೃತಿಯಲ್ಲಿ ಗುತ್ತಿ ಮತ್ತು ಹುಲಿಯನಂತೆ ಹಾಗೂ ಕೇಬಿಕ್ಕಿಯವರ ಪರಿಸರದ ಕತೆಯಲ್ಲಿ ಭೈರನು ಅವನ ನಾಯಿಯನ್ನು ಅಂದರೆ ರಾಮನನ್ನು ಬಳಸಿಕೊಳ್ಳುವ ರೀತಿಯನ್ನು ನೋಡಬಹುದು. ಇವು ಬೇಟೆಗಾಗಿ ದುಡಿದುಕೊಂಡು ಅದರಲ್ಲೇ ಕೀರ್ತಿ ಪಡೆದಿದ್ದವು. ಹಾಗೆಯೇ ಕುವೆಂಪು ಅವರ ಕವನ ಕವನಗಳು ಕೃತಿಯ ಡೂಲಿ ಕವನದ ತಿಮ್ಮ ಮತ್ತು ಡೂಲಿಯ ಪಾತ್ರಗಳಿವೆ. ಕೊನೆಗೆ ಇವರಲ್ಲೇ ನಾಯಿ ಡೂಲಿ ದುರಂತಕ್ಕೀಡಾದದ್ದನ್ನು ಕವಿ ನಿರೂಪಿಸಿದ್ದಾರೆ.

ಡೂಲಿಯ ಈ ದುರಂತಕ್ಕೆ ತಿಮ್ಮನ ಮಾಂಸಾಹಾರ ರುಚಿಯ ಚಟದ ಸ್ವಾರ್ಥ ಸ್ವಭಾವಕ್ಕೆ ನಾಯಿಯನ್ನು ಬಳಸಿಕೊಂಡಿದ್ದು ಮತ್ತು ಅವರೊಡನೆ ತನ್ನ ಪ್ರೀತಿ ಸ್ನೇಹದ ಬಾಂಧವ್ಯ ಬೆಳೆಸಿಕೊಂಡು ಬೆಳೆದ ಪ್ರವೃತ್ತಿಯ ಪರಿಣಾಮವೇ ಡೂಲಿಗೆ ಸಾವು ತಂದಿತು.

ತಿಮ್ಮನಿಗೆ ತನ್ನ ನಾಯಿಯ ಪರಿಜ್ಞಾನವಿಲ್ಲದೆ ಬೇಟೆ ಹಂದಿಯ ಮೇಲೆ ಮಾತ್ರ ಅವನ ಜ್ಞಾನವಿದ್ದು, ಒಂದೇ ಗುಂಡಿಗೆ ಎರಡೂ ಬಲಿಯಾಗಬೇಕಾಯಿತು. ಅವರಿಗೆ ತಮ್ಮ ಬೇಟೆ ಪ್ರಾಣಿಗಳ ಮೇಲೆ ಮಾತ್ರ ಎಚ್ಚರ. ಉಳಿದ ಜನಜೀವನ ಮತ್ತು ಪರಿಸರ ಶೂನ್ಯವಾಗಿರುತ್ತದೆ. ಈ ಸ್ಥಿತಿಯಿಂದ ಆಘಾತ ಉಂಟಾದಾಗ ಆಕಸ್ಮಿಕವೆಂದು ಜಾರಿಕೊಳ್ಳುವುದು ಕೂಡ ಮಾನವನ ಸಹಜ ಸ್ವಭಾವ. ಈ ರೀತಿಯಾಗಿ ತಿಮ್ಮ ಡೂಲಿಯನ್ನು ಕೊಂಡಿದ್ದು. ಈ ರೀತಿಯಾಗಿ ಮಾನವ ಪರಿಸರದ ಮೇಲೆ ಮತ್ತು ಪ್ರಾಣಿಗಳ ಮೇಲೆ ಕ್ರೌರ್ಯವನ್ನು ಮೆರೆಯುತ್ತಾನೆ ಎಂಬುವುದು ಕುವೆಂಪು ಅವರ ಕಥನ ಕವನದಲ್ಲಿ ತಿಳಿಯುತ್ತದೆ.[೧೪]

**೪.೪. ಪರಿಸರದ ಮೇಲೆ ನಡೆಯುತ್ತಿರುವ ದೌರ್ಜನ್ಯ:**

ಗಿಡಮರ, ಪ್ರಾಣಿಪಕ್ಷಿಗಳನ್ನು ಹಿಂಸಾತ್ಮಕವಾಗಿ ನಾಶಗೊಳಿಸುತ್ತಿರುವ ಮನುಷ್ಯ ಜಗತ್ತಿನ ವಿನಾಶಕ್ಕೆ ದಾರಿಮಾಡಿದ್ದಾನೆ. ಇವನು ಸೃಷ್ಟಿಸಿರುವ ಸಮಸ್ಯೆ ತುಂಬ ಸಂಕೀರ್ಣವಾದದ್ದು. ಇದರ ವಿರುದ್ಧದ ಕವಿವಾಣಿ. ಕಟುಕನ ಕೈ ಕತ್ತರಿಸಬೇಕು ಎನ್ನುವ ಆವೇಶಭರಿತ ಮಾತು ಕ್ಷಣಮಾತ್ರದ್ದು. ಇದು ಜನರಲ್ಲಿ ಪ್ರಚೋದನೆಯುಂಟು ಮಾಡಬಲ್ಲದೇ ಹೊರತು ಸಾರ್ವಕಾಲಿಕ ಸರ್ವರ ಸಮಸ್ಯೆಗೆ ಪರಿಹಾರದ ಧ್ವನಿಯಾಗಲಾರದು. ಆದರೆ ಅದು ಸರ್ವರ ಅಂತಃಕರಣವನ್ನು ಕಲಕಿ ಅವರವರ ಮನಪರಿವರ್ತನೆಯಾಗಿ ತಿಳಿವಳಿಕೆಯಿಂದ ಜೀವನ ಪ್ರವೃತ್ತಿ ನಡವಳಿಕೆಯನ್ನು ತಿದ್ದುಕೊಂಡು ಬಾಳುವುದು ದೀರ್ಘ ಪರಿಹಾರವಾಗಬಲ್ಲದು.

ಮನುಷ್ಯ ಮನುಷ್ಯರ ನಡುವೆ ನಡೆಯುವ ದ್ವೇಷ, ಸೇಡುಗಳ ಪರಿಣಾಮದ ಪ್ರಯೋಗವನ್ನು ಮನುಷ್ಯ ಗಿಡಮರ, ಪ್ರಾಣಿಪಕ್ಷಿಗಳ ಮೇಲೆ ನಡೆಸುವುದು ಹಾಸ್ಯಾಸ್ಪದ-ವಾದದ್ದು. ಇದನ್ನೇ ಪ್ರಕೃತಿಯ ಮರಗಳ ಮೇಲಿನ ಅತ್ಯಾಚಾರವೆನ್ನಬಹುದು. ಇಂತಹ ಒಂದು ಸಂದರ್ಭ 'ಕಾನೂರೂ ಹೆಗ್ಗಡಿತಿ' ಕಾದಂಬರಿಯಲ್ಲಿ ಘಟಿಸುತ್ತದೆ.

ಸಾಮಾನ್ಯವಾಗಿ ಪ್ರತಿಯೊಬ್ಬ ಮನುಷ್ಯನಲ್ಲೂ ಕಠಿಣ ಮತ್ತು ಮೃದುತ್ವದ ಗುಣಗಳು ಸುಪ್ತವಾಗಿರುತ್ತವೆ. ಇವುಗಳಲ್ಲಿ ಯಾವುದು ಬಾಹ್ಯವಾಗಿ ಪ್ರಬಲವಾಗಿರುತ್ತದೊ ಆ ಗುಣದಿಂದ ಆ ವ್ಯಕ್ತಿಯನ್ನು ಗುರುತಿಸುವುದು ಸಾಮಾನ್ಯ.

ಯಾವುದೇ ಸಮಸ್ಯೆಗೆ ಹಿಂಸೆ, ಕ್ರೌರ್ಯದಂತಹ ಮಾನವ ಪ್ರವೃತ್ತಿಗಳ ಪರಿಹಾರ-ವಾಗಲಾರವು. ಇದಕ್ಕೆ ಬದಲಾಗಿ ಒಬ್ಬರಿಗೊಬ್ಬರ ನಡುವೆ ಪ್ರೀತಿ ಸಹಬಾಳ್ವೆ ಮತ್ತು ಜ್ಞಾನದರಿವಿನ ಹೊಂದಾಣಿಕೆಯ ಆಂತರ್ಯದ ಬೆಳವಣಿಗೆಗಳಿಂದ ಮಾತ್ರ ಸಾಧ್ಯ. ಇದು ಪರಿಸರದ ಸಮಸ್ಯೆಯೇನು? ಜಗತ್ತಿನ ಸರ್ವ ಸಮಸ್ಯೆಗಳಿಗೂ ಮೂಲಭೂತವಾದ ಐಕ್ಯೈಕ ಮಾರ್ಗದರ್ಶನದ ಬೆಳಕಾಗಿದೆ. ಈ ದಿಕ್ಕಿನಲ್ಲಿ ಸ್ನೇಹ, ಪ್ರೀತಿ, ಮಮತೆಗಳ ಸಹಬಾಳ್ವೆಯೇ ಜೀವಧರ್ಮ. ಇದೇ ಜೀವನ ತತ್ತ್ವ ಎಂಬ ಚಿಂತನೆ ಅಡಕವಾಗಿದೆ. ಇದನ್ನೇ 'ಬೌದ್ಧ

ಮೀಮಾಂಸೆ' ಎನ್ನುವುದು.[೧೫] ಈ ಅಂಶಗಳು ಧರ್ಮಶಾಸ್ತ್ರ ತತ್ತ್ವಶಾಸ್ತ್ರ ಮತ್ತು ಸಾಹಿತ್ಯ ಕಲೆಗಳಲ್ಲಿ, ಕಲ್ಪನೆ, ಭಾವನೆ ಚಿಂತನೆಗಳ ಮೂಲಕ ದರ್ಶನ ನೀಡುತ್ತವೆಯೇ ಹೊರತು ವಿಜ್ಞಾನದ ಮಾಹಿತಿಗಳಲ್ಲಿ ಅದರ ಸಂಶೋಧನಾ ಬರಹಗಳಲ್ಲಿ ಕಾಣದೊರೆಯುವುದಿಲ್ಲ.

ಭೂಮಿ ಕೋಟ್ಯಾನುಕೋಟಿ ಜೀವಿಗಳ ಆವಾಸಸ್ಥಾನ. ಇದರ ಮೇಲ್ಮೈನಲ್ಲಿ ಯಕಶ್ಚಿತ್ ಎನ್ನಬಹುದಾದ ಇರುವೆಯಿಂದ ಬೃಹತ್ತಾದ ಆನೆಯವರೆಗೆ, ಜಲಚರಗಳಲ್ಲಿ ಕಿಂಚಿತ್ ಸೀಗಡಿಯಿಂದ ಭಾರೀ ತಿಮಿಂಗಲದವರೆಗೆ, ವಾಯು ವಿಹಾರಿಗಳಲ್ಲಿ ಸೊಳ್ಳೆ ನೊಣಗಳಿಂದ ರಣಹದ್ದುಗಳವರೆಗೆ, ಸಸ್ಯ ಲೋಕದಲ್ಲಿ ನೆಲಮಟ್ಟದ ಗರಿಕೆಯಿಂದ ಮುಗಿಲೆತ್ತರದ ಗಗನಚುಂಬಿ ಮರಗಳವರೆಗೆ ಎಲ್ಲವನ್ನು ನೆಮ್ಮದಿಯಿಂದ ಬದುಕಿಸುವ ಸಲುಹುವ ಗುಣ–ಶಕ್ತಿ ಈ ಇಳೆಗಿದೆ. ಆದರೆ ಆ ಶಕ್ತಿಯನ್ನು ಇಳಿಮುಖಗೊಳಿಸುತ್ತಿರುವ ಒಂದು ಜೀವಿ ಧರೆಗೆ ಭಾರವಾಗುತ್ತಿದೆ. ಅದಾವುದೆಂದರೆ ಮಾನವ ಕುಲಕೋಟಿ.

ಜೀವರಾಶಿಗಳಿಗೆ ಈ ಭೂಮಿ ಸ್ವರ್ಗ. ಇಂಥ ಸೊಗಸಾದ ತಾಣ ಸೂರ್ಯನ ಸಂಸಾರ (ಸೌರವ್ಯೂಹ)ದಲ್ಲಿ ಬೇರೆಲ್ಲೂ ಸಿಗದು. ಭೂಮಿಯಂತದ್ದೇ ಹತ್ತಾರು ಗ್ರಹಗಳಿದ್ದರೂ ಒಂದರಲ್ಲಿ ಮಣ್ಣಿದ್ದರೆ ಇನ್ನೊಂದರಲ್ಲಿ ನೀರಿಲ್ಲ. ಮತ್ತೊಂದರಲ್ಲಿ ಗಾಳಿ ಇಲ್ಲ. ಮಗದೊಂದರಲ್ಲಿ ..... ಹೀಗೆ ಬೆಳೆಯುತ್ತಾ ಹೋಗುತ್ತದೆ. ಭೂಮಿಯಲ್ಲಿ ಯಾವುದೂ ಇಲ್ಲ ಎನ್ನುವಂತೆಯೇ ಇಲ್ಲ. ಇಂಥ ಕೊಡುಗೈ ತಾಯಿ ಧರಣಿಗೆ ಈ ಜೀವಕೋಟಿಗಳ ಅಗತ್ಯ. ಆಸೆಗಳನ್ನೆಲ್ಲಾ ಪೂರೈಸುವ ತಾಕತ್ತಿದೆ. ಹಾಗಾಗಿ ಎಲ್ಲವೂ ಸುಖದಿಂದಿವೆ. ದುರಾಸೆಯ ಬುದ್ಧಿಗೇಡಿ ಮನುಷ್ಯನನ್ನು ಬಿಟ್ಟು.

"ಪ್ರಕೃತಿ ಎಲ್ಲರ ಆಸೆಯನ್ನು ಈಡೇರಿಸುತ್ತದೆ. ಆದರೆ ದುರಾಸೆಯನ್ನಲ್ಲ" ಬದುಕುವ ಸಲುವಾಗಿ ಹಸಿದಾಗ ತಿನ್ನಬೇಕು ಎಂದು ಎಲ್ಲ ಜೀವಿಗಳೂ ಇದ್ದರೆ, ನಾವು ಮಾತ್ರ ಈಗ ತುತ್ತಿನ ಚೀಲ ತುಂಬಿದ್ದರೂ ಮುಂದಿನ ತಲೆಮಾರಿಗೆ ಕೂಡಿಡುವ ಧಾವಂತದಲ್ಲಿದ್ದೇವೆ. ಹೀಗಾಗಿ ಕಂಡದ್ದೆಲ್ಲಾ ನಮ್ಮ ಸ್ವಂತದ್ದಾಗಬೇಕು ಎಂಬ ಕೆಟ್ಟ ಹಂಬಲ. ಅದಕ್ಕಾಗಿ ಪ್ರಕೃತಿ ಮೇಲೆ ನಿತ್ಯ ದೌರ್ಜನ್ಯ ಎಸಗುತ್ತಿದ್ದೇವೆ. ನಮ್ಮದೆಂಬ ಗೂಡು ನಿರ್ಮಿಸಿಕೊಂಡು ಭದ್ರಪಡಿಸಿಕೊಳ್ಳುತ್ತಿದ್ದೇವೆ ಎಂಬ ಭ್ರಮೆಯಲ್ಲಿದ್ದೇವೆ. ವಾತಾವರಣದಲ್ಲಿ ಇರಬೇಕಾದ ವಸ್ತುಗಳೆಲ್ಲಾ ಅಗತ್ಯ ಪ್ರಮಾಣದಲ್ಲೇ ಇದ್ದರೆ ಭೂಮಿ ಇನ್ನಷ್ಟು ಕಾಲ ಜನಸ್ನೇಹಿಯಾಗಿರುತ್ತದೆ. ಈಗಾಗಲೇ ಮರಗಳ ಹನನ, ಅರಣ್ಯನಾಶ, ಕೆರೆ–ಕಟ್ಟೆಗಳ ಮುಚ್ಚುವಿಕೆಯಿಂದ ಜಾಗತಿಕ ತಾಪಮಾನ ಮಿತಿಮೀರಿದೆ. ಇನ್ನಷ್ಟು ದಿನ ಹೀಗೇ ಆದರೆ ಭೂಮಿ ಕಲ್ಲಿದ್ದಲ್ಲಿನ ರೈಲ್ವೆ ಎಂಜಿನ್‌ನಂತೆ ಕೊತ ಕೊತ ಕುದಿಯದಿರದು.[೧೬]

ಇಡೀ ವಿಶ್ವದ ಕೇಂದ್ರಬಿಂದು ಮಾನವ ಮತ್ತವನ ಮಿದುಳು. ಮಾನವ ತನ್ನ ಲೋಭ ದುರಾಸೆಯಿಂದಾಗಿ, ಸಮತೋಲನದಲ್ಲಿದ್ದ ಪ್ರಕೃತಿ ಮೇಲೆ ತನ್ನ ಜ್ಞಾನದ ಬಲದಿಂದ ಪ್ರಹಾರ ನಡೆಸುತ್ತಲೇ ಬರುತ್ತಿದ್ದಾನೆ. ಇಡೀ ಭೂಮಿಯ ಮೇಲ್ಮೈ ಭೂಗರ್ಭದಲ್ಲಿ ಭೂಮಿಯ ಸುತ್ತ ಎಲ್ಲ ಕಡೆಯಿಂದಲೂ ಪ್ರಕೃತಿಯ ಮೇಲೆ ಪ್ರಹಾರ ನಡೆಯುತ್ತಲೇ ಇದೆ. ಮಣ್ಣು, ನೀರು, ಗಾಳಿ ಎಲ್ಲವೂ ವಿಷಭರಿತವಾಗಿವೆ. ಮನುಷ್ಯನ ದುರಾಸೆ ಮಿತಿಮೀರಿದ್ದು, ತನ್ನ ಸ್ವಾರ್ಥಕ್ಕಾಗಿ ಏನೂ ಮಾಡಲೂ ಹೇಸದವ. ತನಗಾಗಿ ಪ್ರಾಣಿ ಪಕ್ಷಿ, ಗಿಡಸಂಕುಲಗಳನ್ನು ಇಲ್ಲ-ವಾಗಿಸುತ್ತಿರುವ ಮಾನವ ತನ್ನದೇ ಕುಲ ಮಾನವನನ್ನೂ ಬಿಡದಷ್ಟು ಸ್ವಾರ್ಥಿ.

ಸಹಸ್ರಾರು ವರ್ಷಗಳಿಂದ ಕಾಡಿನಲ್ಲಿ ತನ್ನದೇ ನ್ಯಾಯದಲ್ಲಿ ಬದುಕುತ್ತಿರುವ ಪ್ರಾಣಿಸಂಕುಲವನ್ನು ಅವುಗಳ ಚರ್ಮಕ್ಕಾಗಿ, ಹಲ್ಲಿಗಾಗಿ, ದವಡೆಗಳಿಗಾಗಿ, ಕೂದಲಿಗಾಗಿ, ಮಾಂಸಕ್ಕಾಗಿ, ಕೋಡುಗಳಿಗಾಗಿ, ದೇಹದ ಕೊಬ್ಬಿಗಾಗಿ – ಹೀಗೆ ಪ್ರಾಣಿಗಳ ಅಂಗುಲ ಅಂಗುಲವನ್ನೂ ಬಿಡದೇ ತನ್ನ ದುರಾಸೆಗಾಗಿ ಬಳಸಿಕೊಳ್ಳುತ್ತಿರುವುದು ದಿಗಿಲು ಮೂಡಿಸುತ್ತಿದೆ. ಸಹಸ್ರಗಳಲ್ಲಿದ್ದ ಪ್ರಾಣಿಪ್ರಭೇದಗಳು, ಪಕ್ಷಿ ಪ್ರಭೇದಗಳು ಇಂದು ನೂರಕ್ಕೆ ಇಳಿಯುತ್ತಿವೆ. ಎಷ್ಟೋ ವನ್ಯಜೀವಿಗಳು ಹೇಳಹೆಸರಿಲ್ಲದಂತಾಗಿವೆ. ಇನ್ನು ಕೆಲವು ಅಳಿವಿನಂಚಿಗೆ ಬಂದಿವೆ.

ಪರಿಸರ ಸಮತೋಲನವೆಂದರೆ ಭೂಮಿಯ ಮೇಲಿನ ಸಕಲ ಜೀವಜಂತು ಜಾಲಗಳ ಸಮತೋಲನ ಎಂದರ್ಥ. ಪ್ರತಿಯೊಂದಕ್ಕೂ ತಮ್ಮದೇ ಆದ ಮಹತ್ವದ ಪಾತ್ರವಿದೆ. ಒಂದು ಇಲ್ಲವಾದರೂ ಉಳಿದ ಕೊಂಡಿಗಳು ಕಳಚುತ್ತಾ ಬರುತ್ತವೆ. ಈ ಹಿನ್ನೆಲೆಯಲ್ಲಿ ವನ್ಯಜೀವಿಗಳ ನಾಶ ಎಂದರೆ ಪರಿಸರ ಸಮತೋಲನದ ಒಂದು ಕೊಂಡಿ ಮುರಿದಂತೆ.

"ಬಿಡದಿಯಿಂದ ಮೂರು ಮೈಲಿ ದೂರದಲ್ಲಿ ಒರಕುಂಬನ್ ಎಂಬ ಕಾಡು ಪ್ರದೇಶದಲ್ಲಿ ಅಣೆಕಟ್ಟು ಹಾಕಿ ಕೃತಕ ಸರೋವರವೊಂದನ್ನು ನಿರ್ಮಿಸಲಾಗಿದೆ. ಮೊದಲ ಎರಡು ಮೈಲಿಗಳು ಕಾಡುರಸ್ತೆ ಎನ್ನಿಸಿಕೊಂಡರೂ ಬೆಳೆ ಅಷ್ಟಿಲ್ಲ ಕುರುಚಲು ಕಾಡು ವೃಕ್ಷ ಸಂಖ್ಯೆ ಕಡಿಮೆ, ಅಣೆಕಟ್ಟು ಹಾಕುವುದಕ್ಕೆ ಮುಂಚೆ ಈ ಪ್ರದೇಶ ದಟ್ಟವಾದ ಕಾಡಾಗಿತ್ತು. ಯೋಜನೆ ಕಾರ್ಯರೂಪಕ್ಕೆ ತಿರುಗಿದಾಗ ಕೆಲಸಗಾರರ ಅಧಿಕಾರಿಗಳ ವಸತಿಗಾಗಿ ಮನೆಗಳನ್ನು ಕಟ್ಟುವುದಕ್ಕಾಗಿ ಆ ಕಾಡನ್ನು ನೆಲಸಮ ಮಾಡಿದರು. ಕಟ್ಟಡಗಳಿಗೆ ದೊಡ್ಡ ದೊಡ್ಡ ಮರಗಳನ್ನು ಕೆಡವಿದರು. ಕೆಲವು ಮಂದಿ ವಾಸಿಸಲು ಬಂದವರಿಗೆ ಸೌದೆಗಾಗಿ ಸಣ್ಣಪುಟ್ಟ ಮರಗಳನ್ನು ಕೆಡವಿದರು.

ಇನ್ನು ಹಲವು ಮಂದಿ ಬೇಸಾಯ ಮಾಡಬಹುದೆಂದು ಕೆಲವು ಸಾಹಸಿಗಳು ನೆಲವನ್ನು ಸಾಗುವಳಿಗಾಗಿ ಅಗೆದು ಸಮಮಾಡಿದರು. ಇದರಿಂದ ಅರಣ್ಯಪ್ರದೇಶ ನಾಶವಾಯಿತು. ಹೀಗಾಗಿ ಐದು ವರ್ಷಗಳೊಳಗೆ ೧೫ ಚದರ ಮೈಲಿ ವಿಸ್ತೀರ್ಣ

ಬೆಂಗಾಡಾಗಿ ಹೋಯಿತು. ಇದರಿಂದ ಹಲವು ಪ್ರಾಣಿಪಕ್ಷಿಗಳು ತಮ್ಮ ಜೀವವನ್ನು ಕಳೆದುಕೊಂಡವು. ಜೀವಸಂಕುಲಗಳಿಗೆ ಆಸರೆಯಾಗಿದ್ದ ಕಾಡು ನಶಿಸಿಹೋಯಿತು. ಮಾನವನ ಸ್ವಾರ್ಥಕ್ಕಾಗಿ ಮತ್ತು ಅರಣ್ಯ ಒತ್ತುವರಿಗಳಿಂದಾಗಿ ಕಂಗೆಟ್ಟು ಆಹಾರಕ್ಕಾಗಿ ನೀರಿಗಾಗಿ ತಾವೆಂದೂ ತಿಳಿದಿರದ, ನೋಡಿರದ ನಾಡಿಗೆ ಬಂದು ಸಾವನ್ನಪ್ಪುತ್ತಿವೆ".[೧೭]

ಕೆ.ಪಿ.ಪೂರ್ಣಚಂದ್ರತೇಜಸ್ವಿಯವರ **'ಪರಿಸರದ ಕಥೆ'** ಎಂಬ ಪುಸ್ತಕದಲ್ಲಿ ಮನುಷ್ಯ ತನ್ನ ದುರಾಸೆಗಾಗಿ ಪರಿಸರದ ಮೇಲೆ ನಡೆಯುತ್ತಿರುವ ದೌರ್ಜನ್ಯಗಳ ವಿವರಗಳನ್ನು ನೋಡಬಹುದು. ಹಾಗೆಯೇ ಅವನ ಸ್ವಾರ್ಥಕ್ಕಾಗಿ ಪ್ರಾಣಿಪಕ್ಷಿಗಳನ್ನು ಬಳಸಿಕೊಳ್ಳುವುದನ್ನು ನಾವು ನೋಡುವುದಾದರೆ ಭೈರನ ಹತ್ತಿರ ಒಂದು ಕಂತ್ರಿನಾಯಿ ಇತ್ತು. ಅದಕ್ಕೆ ಅವನು ರಾಮ ಎಂದು ಹೆಸರಿಟ್ಟಿದ್ದ. ಅದೊಂದು ಅತ್ಯುತ್ತಮ ಶಿಕಾರಿ ನಾಯಿಯಾಗಿತ್ತು. ಮತ್ತು ಆ ನಾಯಿಯನ್ನು ಅನಾವಶ್ಯಕವಾಗಿ ಬಾಳೆನಾರಿನ ಹಗ್ಗದಲ್ಲಿ ಕಟ್ಟಿಹಾಕುತ್ತಿದ್ದು. ಅದಕ್ಕೆ ಸರಿಯಾಗಿ ಊಟ ಸಹ ಕೊಡುತ್ತಿರಲಿಲ್ಲ. ಬೇಟೆಯಾಡಿದ ಶಿಕಾರಿಯನ್ನು ಆ ನಾಯಿ ತಿಂದಿದ್ದಕ್ಕೆ ಅದರ ಬಾಯಲ್ಲಿ ರಕ್ತ ಬರುವಂತೆ ಹೊಡೆದಿದ್ದ. ಇದರಿಂದ ತಿಳಿಯುತ್ತದೆ. ಮನುಷ್ಯ ಎಷ್ಟು ಸ್ವಾರ್ಥಿ ಅಂತ ತಿಳಿಯುತ್ತದೆ. ಶಿಕಾರಿ ಮಾಡಲು ಮಾತ್ರ ಆ ನಾಯಿಯನ್ನು ಭೈರ ಬಳಸುತ್ತಿದ್ದನ್ನು ಇಬ್ಬರು ಶಿಕಾರಿ ಮಾಡಿದ ನಂತರ ಆ ನಾಯಿಯ ಪಾಲನ್ನು ದುರಾಸೆಯ ಮನುಷ್ಯ ಬಳಸಿಕೊಳ್ಳುತ್ತಿದ್ದನು. ಅದರ ಪ್ರಾಣವನ್ನು ಲೆಕ್ಕಿಸದೇ ಮತ್ತು ಅದರ ಮೇಲೆ ಕರುಣೆಯಿಲ್ಲದೆ ಅದನ್ನು ತನ್ನ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿರುವುದನ್ನು ನೋಡಿದ್ದಾರೆ. ಅಯ್ಯೊ ಪಾಪ ಅನ್ನಿಸುತ್ತದೆ.

ಆ ನಾಯಿಗೆ ಇವನೂ ಕೂಳು ಹಾಕದೆ ಅದಕ್ಕೂ ಅನ್ನ ಸಂಪಾದಿಸಿಕೊಳ್ಳಲು ಬಿಡದೆ ಕಟ್ಟಿಹಾಕಿದ್ದರಿಂದಲೇ ಹಸಿವಿನಿಂದ ಕಂಗಲಾದ ಅದು ಕಾಡಿನ ಮೌನಕ್ಕೆ ಬರೆ ಎಳೆದಂತೆ ಊಳಿಟ್ಟಿದ್ದು. ಅದೊಂದು ಕ್ಷುದ್ರ ಜೀವಿಯಾಗಿ ಭೈರನ ಕೈಯ್ಯಲ್ಲಿ ಸಿಕ್ಕಿ ನರಳುತ್ತಿದ್ದರೂ ಸಹ ಅದು ಒಡೆಯನಿಗೆ ನಿಷ್ಠೆಯಿಂದ ನಡೆದುಕೊಳ್ಳುವುದನ್ನು ಇಲ್ಲಿ ಗಮನಿಸಬಹುದು. ಭೈರನೂ ಮಾಸ್ತಿಯೂ ಅವರ ಶಿಕಾರಿ ನಾಯನ್ನು ನಡೆಸಿಕೊಳ್ಳುವ ರೀತಿ ನೋಡಿದರೆ ತುಂಬಾ ಕ್ರೂರಿಗಳು ನಿರ್ದಯಿಗಳು ಎಂದೆನ್ನಿಸುತ್ತದೆ. ಅವರೊಡನೆ ಅದೂ ಕಾಡು ತಿರುಗಿ ಶಿಕಾರಿಯಲ್ಲಿ ಸಹಾಯ ಮಾಡಿದರೂ ಅದರ ಬಗ್ಗೆ ಕೊಂಚವಾದರೂ ಕರುಣೆ, ಕೃತಜ್ಞತೆ ತೂರಿಸುವುದಿಲ್ಲವಲ್ಲ ಎಂದು ವ್ಯಸನವಾಗುತ್ತದೆ. ಆದರೆ ಅವರು ನಾಯಿಗೆ ನಮ್ಮಂತೆ ಮಾನವೀಯ ವ್ಯಕ್ತಿತ್ವವನ್ನು ತೂರುತ್ತಿರಲಿಲ್ಲ. ನಾಯನ್ನು ನಾಯಿಯಂತೆಯೂ, ಮನುಷ್ಯರನ್ನು ಮನುಷ್ಯರಂತೆಯೂ ಪ್ರಾಣಿಗಳನ್ನು ಪ್ರಾಣಿಗಳಂತೆಯೂ ನೋಡುತ್ತಿದ್ದರು.

ಒಂದು ವೇಳೆ ನಾಯಿಗೆ ನಾವು ಮಾಡುವಂತೆ ಮಾನವೀಯ ವ್ಯಕ್ತಿತ್ವವನ್ನು ಆರೋಪಿಸಿ ನಮ್ಮಂತೆಯೇ ಅದು ಎಂದು ನೋಡುವುದರಿಂದ ಅದಕ್ಕೆ ಸಂತೋಷವಾಗಲೀ

ಪ್ರಯೋಜನವಾಗಲೀ ಉಂಟೇ ಎಂಬುದು ಲೇಖಕರ ವಾದ. ಆ ನಾಯಿಯೂ ಅನೇಕ ವೇಳೆ ಶಿಕಾರಿಯಲ್ಲಿ ಹೊಡೆದ ಸಣ್ಣಪುಟ್ಟ ಪ್ರಾಣಿಗಳನ್ನು ಹೊತ್ತುಕೊಂಡು ಕಾಡಿನೊಳಗೆ ಓಡಿದರೆ ಅದನ್ನು ಕಸಿದುಕೊಳ್ಳಲು ಅದನ್ನು ಬೆನ್ನಟ್ಟಿ ಕೆಲವೊಮ್ಮೆ ಅದರ ಬಾಯಿಯಿಂದ ಕಸಿದುಕೊಳ್ಳುತ್ತಿದ್ದರು. ಒಟ್ಟಿನಲ್ಲಿ ಅದಕ್ಕೆ ಸ್ವತಂತ್ರವೇ ನೀಡುತ್ತಿರಲಿಲ್ಲ.

ಅಷ್ಟೇ ಅಲ್ಲದೇ ಪ್ರಾಣಿಗಳನ್ನು ಕೊಲ್ಲಲು ಪಟಾಸು ಮದ್ದು ಮತ್ತು ಢಡಾಕಿ ಮದ್ದು ಬಳಸುತ್ತಿದ್ದರು. ನಾಢು ಬಾಂಬುಗಳಂಥ ಸಿಡಿಮದ್ದಿನ ಉಂಡೆಗಳನ್ನು ಮಾಡಿ ಅವುಗಳನ್ನು ದುರ್ನಾತ ಹೊಡೆಯುವ ಚರ್ಮದಲ್ಲಿ ಸುತ್ತಿಟ್ಟರೆ ಕಾಡುಹಂದಿಗಳು ಮತ್ತು ಹಲವು ಪ್ರಾಣಿಗಳು ಅದನ್ನು ತಿನ್ನಲು ಬಂದು ದವಡೆಯಲ್ಲಿ ಅಗಿದಾಗ ಸಿಡಿದು ಅವು ಸತ್ತು ಬೀಳುತ್ತಿದ್ದವು. ಈ ರೀತಿಯಲ್ಲಿ ಸ್ವಾರ್ಥ ಮನುಷ್ಯ ತನ್ನ ಇಚ್ಛಾಸಕ್ತಿಗೆ ಅನುಗುಣವಾಗಿ ಬೇಟೆಯಾಡುತ್ತಿದ್ದನು.

ಈ ಭೂಮಿಯ ಮೇಲೆ ಬದುಕಲು ನಮಗೆಷ್ಟು ಹಕ್ಕಿದೆಯೋ ಅಷ್ಟೇ ಹಕ್ಕು ವನ್ಯಜೀವಿಗಳಿಗೂ ಇದೆ. ಅದನ್ನು ಗೌರವಿಸೋಣ, ಗೌರವಿಸಲು ಬೇಕಾದ ಅರಿವುಮೂಡಿಸಲು ಹಲವು ಲೇಖಕರು, ಪರಿಸರವಾದಿಗಳು ಜನರಲ್ಲಿ ತಿಳಿವಳಿಕೆ ಮೂಡಿಸುತ್ತಾ ಬಂದಿದ್ದಾರೆ. ಈ ಭೂಮಿಯ ಒಡೆತನ ಕೇವಲ ಮಾನವನದಲ್ಲ ಭೂಮಿಯ ಮೇಲಿರುವ ಪ್ರಾಣಿ, ಪಕ್ಷಿ, ನೀರು ಸಸ್ಯಸಂಕುಲಗಳೆಲ್ಲಾ ಇದರ ಭಾಗೀದಾರರು ಎಂಬ ಸತ್ಯ ಪೀಳಿಗೆಯಿಂದ ಪೀಳಿಗೆಗೆ ರವಾನೆಯಾಗುತ್ತಿರಲಿ.[೧೮]

## ಅಭಿವೃದ್ಧಿಯ ಹೆಸರಿನಲ್ಲಿ ಪ್ರಕೃತಿಮಾತೆ ಮೇಲೆ ನಡೆಯುತ್ತಿರುವ ದೌರ್ಜನ್ಯ

ಕೋಟ್ಯಂತರ ವೆಚ್ಚದ ಗಣಿಗಾರಿಕೆ ಯೋಜನೆಗಾಗಿ ಕಾಡಿನಲ್ಲಿ ವಾಸವಾಗಿರುವ ಆದಿವಾಸಿಗಳನ್ನು ಒಕ್ಕಲೆಬ್ಬಿಸಿ ಆ ಪ್ರದೇಶದ ಅಪಾರ ಸಸ್ಯಸಂಪತ್ತು, ಪರ್ವತಶ್ರೇಣಿಯನ್ನು ಇನ್ನಿಲ್ಲವಾಗಿಸಲು ವಿದೇಶಿಮೂಲದ ಖಾಸಗಿ ಸಂಸ್ಥೆಗಳು ಮುಂದಾಗಿವೆ. ದೇವರೆಂದು ಪೂಜಿಸುವ ಪ್ರಕೃತಿಯನ್ನೇ ಧ್ವಂಸಗೊಳಿಸಲು ಮುಂದಾಗಿರುವ ಖಾಸಗಿ ಹಿತಾಸಕ್ತಿಗಳ ವಿರುದ್ಧ ಬಂಡಾಯ ಸಾರಿರುವ ಆದಿವಾಸಿಗಳು ಸರ್ವೇ ಕಾರ್ಯಕ್ಕೆ ಬಂದ ಸಂಸ್ಥೆ ಸದಸ್ಯರ ವಿರುದ್ಧ ಆಕ್ರೋಶ ವ್ಯಕ್ತಪಡಿಸಿದ್ದಾರೆ.

ಪ್ರೊ. ಮಾಧವಗಾಡ್ಗೀಳ್ ಹೇಳುವಂತೆ ಕನ್ನಡದ ಬಹುಪಾಲು ಪರಿಸರ ಬರಹಗಾರರಿಗೆ 'ಪರಿಸರ' ಕೈಗಾರಿಕೆ, ವಾಯು ಜಲಮಾಲಿನ್ಯಗಳಾಗಿ ಮಾತ್ರ ಕಾಣುತ್ತವೆ. ಇಲ್ಲಿನ ಮೇಲ್ವರ್ಗಗಳ ಸಂಪನ್ಮೂಲಗಳ ಲೂಟಿ, ಸಾಮಾಜಿಕ ಅಸಮಾನತೆ, ಸಂಪನ್ಮೂಲಗಳ ಅಸಮಾನ ಹಂಚಿಕೆಯಲ್ಲಿ ಮೇಲುಗೈ ಸಾಧಿಸಿರುವ ಶ್ರೀಮಂತರು ಹಾಗೂ ಅವರ ಕ್ರೌರ್ಯದ ಬಗ್ಗೆ ಈ ಜನ ಮೌನವಾಗಿಯೇ ಉಳಿಯುತ್ತಾರೆ. ಹಾಗೇ ಸ್ವಾರ್ಥಪರವಾದ ಚಳವಳಿಕಾರರು ಸಹ ಇವರಿಗೆ ದಿವ್ಯಪರಿಸರ ಸಂರಕ್ಷಕರಾಗಿ ಕಾಣುತ್ತಾರೆ.

ಕಬ್ಬಿಣ, ಅಲ್ಯುಮಿನಿಯಂ ಹಾಗೂ ಸತು ಅದಿರುಗಳ ನಿಕ್ಷೇಪ ವ್ಯಾಪಕವಾಗಿರುವ 'ನಿಯಮಗಿರಿ' ಪರ್ವತಶ್ರೇಣಿ ಹಸಿರಿನಿಂದ ನಳನಳಿಸುತ್ತಿದೆ. ಅಪಾರ ಜೀವಪ್ರಾಣಿಸಂಕುಲ ಇಲ್ಲಿದೆ. ಭಾರತೀಯ ಅಭಯಾರಣ್ಯ ಕಾಯ್ದೆ ಕಲಂ ೧೮ರ ಅಡಿಯಲ್ಲಿ ಇದನ್ನು ಸಂರಕ್ಷಿತ ಅರಣ್ಯ ಎಂದು ಘೋಷಿಸಲಾಗಿದೆ. ಆನೆಗಳ ಸುರಕ್ಷಿತ ಪ್ರದೇಶ ಎಂದು ೨೦೦೪ರಲ್ಲಿ ಒರಿಸಾ ಸರ್ಕಾರವೇ ಅಧಿಸೂಚನೆ ಹೊರಡಿಸಿದೆ. ಇಂತಹ ಪ್ರದೇಶದಲ್ಲಿ ಒಮ್ಮೆ ಗಣಿಗಾರಿಕೆ ಆರಂಭವಾದರೆ ಇಡೀ ವ್ಯವಸ್ಥೆಯೇ ಅಲ್ಲೋಲಕಲ್ಲೋಲಗೊಳ್ಳುತ್ತದೆ ಎಂಬ ಅರಿವಿದ್ದರೂ ಸರ್ಕಾರ ವೇದಾಂತ ಖಾಸಗಿ ಕಂಪೆನಿಗೆ ಪರಿಸರ ಇಲಾಖೆ ೨೦೦೬ರ ಏಪ್ರಿಲ್ ೨೬ರಂದು ಗಣಿಗಾರಿಕೆ ಆರಂಭಕ್ಕೆ ಹಸಿರು ನಿಶಾನೆ ತೋರಿರುವುದರಿಂದ ಸರ್ಕಾರವೇ ನಿಯಮ ಉಲ್ಲಂಘಿಸಿರುವ ಆಪಾದನೆಗೆ ಗುರಿಯಾಗಿದೆ.[೧೯]

ಯಾವುದೇ ಒಂದು ಪ್ರದೇಶದಲ್ಲಿ ಕಂಡುಬರುವ ಜೀವಿಗಳ ಒಟ್ಟು ಮೊತ್ತವನ್ನು 'ಜೀವವೈವಿಧ್ಯ' ಎಂದು ಕರೆಯುತ್ತಾರೆ. ಶ್ರೀಮಂತವಾದ ಜೀವವೈವಿಧ್ಯ ಪಶ್ಚಿಮಘಟ್ಟಗಳ ವಿಶೇಷತೆ, ಭಾರತದಲ್ಲಿ ಕಂಡುಬರುವ ಒಟ್ಟು ೧೩೦೦೦ ಹೂ ಬಿಡುವ ಸಸ್ಯಗಳಲ್ಲಿ ಸುಮಾರು ೩೫೦೦ ಕೇವಲ ಪಶ್ಚಿಮ ಘಟ್ಟಗಳಿಗೇ ಸೀಮಿತವಾಗಿವೆ. ಏರುತ್ತಿರುವ ತಾಪಮಾನ ಇಲ್ಲಿರುವ ಈ ಜೀವಿ ವೈವಿಧ್ಯದ ಮೇಲೆ ಪ್ರತಿಕೂಲ ಪರಿಣಾಮವನ್ನು ಬೀರುತ್ತಿರುವುದು ಈಗಾಗಲೇ ಅಧ್ಯಯನಗಳಿಂದ ದೃಢಪಟ್ಟಿದೆ. ೨೮೭ ಆರ್ಕಿಡ್ ಜಾತಿಯ ಸಸ್ಯಗಳಲ್ಲಿ ೩೧ ಕೇವಲ ಪಶ್ಚಿಮ ಘಟ್ಟಗಳಿಗೆ ಸೀಮಿತವಾಗಿದ್ದು ಅವು ಅಳಿವಿನ ಅಂಚಿನಲ್ಲಿವೆ. ಪಶ್ಚಿಮ ಘಟ್ಟಗಳಲ್ಲಿ ೭೦೦ ವಿವಿಧ ಜಾತಿಯ ಔಷಧಿ ಸಸ್ಯಗಳು ಇವೆ. ಇಲ್ಲಿ ಯಥೇಚ್ಛವಾಗಿ ಲಭ್ಯವಿದ್ದ ಸರ್ಪಗಂಧಿ-ಯಂತಹ ಔಷಧೀಯ ಸಸ್ಯಗಳು. ಹಾಗೆಯೇ ಹಲವು ಸಸ್ಯಗಳು ಇಲ್ಲಿ ಅಪರೂಪ-ವಾಗಲಾರಂಭಿಸಿವೆ. ಸಮೃದ್ಧವಾಗಿ ದೊರೆಯುತ್ತಿದ್ದ 'ಜೇನು' ಕಡಿಮೆಯಾಗಿದೆ. ಕ್ಯಾನ್ಸರ್, ಝೂಂಡೀಸ್, ಅಸ್ತಮಾ, ಉಸಿರಾಟದ ತೊಂದರೆಗಳಂತಹ ಹಲವಾರು ರೋಗಲಕ್ಷಣಗಳಿಗೆ ಔಷಧಿಯಾಗುತ್ತಿರುವ ಸಸ್ಯಗಳು ಮರೆಯಾಗುತ್ತಿವೆ. ಕೆಲವಂತೂ ನಶಿಸಿಹೋಗಿವೆ.

ಇಂಥ ಅಪರಿಮಿತ ನೈಸರ್ಗಿಕ ಸಂಪನ್ಮೂಲಗಳಿರುವ ಪಶ್ಚಿಮಘಟ್ಟಗಳ ಮೇಲೆ ಐದಾರು ದಶಕಗಳಿಂದ ನಿರಂತರ ಆಕ್ರಮಣಗಳು ನಡೆಯುತ್ತಲೇ ಇವೆ. ಅರಂಭದಲ್ಲಿ ಜನಸಂಖ್ಯೆಯಿಂದಾಗಿ ಕೃಷಿಭೂಮಿಯ ವಿಸ್ತರಣೆಗೆಂದು ರೈತರು ಅರಣ್ಯ ಕಡಿದು ಅತಿಕ್ರಮ ಸಾಗುವಳಿ ಆರಂಭಿಸಿದರು. ಇನ್ನೊಂದು ಕಡೆ ಅರಣ್ಯ ಉತ್ಪನ್ನಗಳಾದ ಮೆಣಸು, ದಾಲಚಿನ್ನಿ, ಜೇನು, ಬತ್ತ, ಧೂಪ, ದಂತ, ಬಗಿನೆ, ಬಿದಿರುಗಳಿಗೆ ಬೇಡಿಕೆ ಹೆಚ್ಚಾದ್ದರಿಂದ ಅಭಿವೃದ್ಧಿಗಾಗಿ ಉದ್ದಿಮೆಗಳ ಸ್ಥಾಪನೆ, ಖನಿಜಕ್ಕಾಗಿ ವಿದ್ಯುತ್ತಿಗೆಂದು ಸರ್ಕಾರವೇ ಪಶ್ಚಿಮ ಘಟ್ಟಗಳಿಗೆ ಲಗ್ಗೆ ಹಾಕಿದ್ದು. ಹೀಗೆ ನೋಡ ನೋಡುತ್ತಲೇ ಬೆಟ್ಟಗುಡ್ಡಗಳು ಕರಗುತ್ತಿವೆ.[೨೦]

ಕಳೆದ ೨೫ ವರ್ಷಗಳಲ್ಲಿ ಸರ್ಕಾರದ ಹಸ್ತಕ್ಷೇಪದಿಂದಾಗಿಯೇ ಪರಿಸರ ಪತನ ಆರಂಭವಾಗಿದೆ. ಅಭಿವೃದ್ಧಿಯ ನೆಪದಲ್ಲಿ ನೂರಾರು ಹೆಕ್ಟೇರ್ ಅರಣ್ಯ ನಾಶವಾಗಿದೆ. ಜಲಾಶಯಕ್ಕಾಗಿ ೩೫,೮೪೦ ಹೆಕ್ಟೇರ್ ಅರಣ್ಯಪ್ರದೇಶ ನೀರಿನಲ್ಲಿ ಮುಳುಗಿದೆ. ಗಣಿ ನಿಕ್ಷೇಪಕ್ಕಾಗಿ ೪೨,೬೭೬ ಹೆಕ್ಟೇರ್ ಬಲಿಯಾಗಿದೆ. ಸಂತ್ರಸ್ತರ ಪುನರ್ವಸತಿಗೆಂದು ೨೫,೮೨೦ ಹೆಕ್ಟೇರ್ ನೆಲಸಮವಾಗಿದೆ. ಕಾಳಿ ವಿದ್ಯುತ್ ಯೋಜನೆಗೆ ೧೨,೫೦೦ ಹೆಕ್ಟೇರ್ ಚಕ್ರಾ ಯೋಜನೆಗೆ ೨,೬೦೦ ಹೆಕ್ಟೇರ್ ವರಾಹಿಗೆ ೧೮೬೨.೪ ಹೆಕ್ಟೇರ್ ಗಂಗಾವತಿಗೆ ೧೦,೦೨೯ ಹೆಕ್ಟೇರ್ ರಸ್ತೆ, ಪಟ್ಟಣ, ವಿದ್ಯುತ್ ತಂತಿಗೆ ೧೦,೪೦೧ ಕೃಷಿಗೆ ಪರಿವರ್ತಿಸಿದ್ದು ೬೭,೨೧೭ ಒಟ್ಟು ೨೨,೭೨೭ ಹೆಕ್ಟೇರ್ ಅರಣ್ಯ ನಾಶವಾಗಿದೆ. ಇದು ಹಲವು ಹಿಂದಿನ ವರ್ಷಗಳ ಅಂಕಿಅಂಶಗಳು ಇವತ್ತಿಗೆ ಲೆಕ್ಕಚಾರ ಮಾಡಿದರೆ ಅರಣ್ಯಪ್ರದೇಶದ ವಿಸ್ತೀರ್ಣ ಇನ್ನೂ ಕುಸಿದಿರುವ ಸಾಧ್ಯತೆಗಳಿವೆ. ಇತ್ತೀಚಿನ ಗಣಿಚಟುವಟಿಕೆಯಿಂದ ಪರಿಸರ ಇನ್ನೂ ಹೆಚ್ಚಿನ ರೀತಿಯಲ್ಲಿ ಹಾನಿಗೀಡಾಗುತ್ತಿದೆ.

**೪.೫. ಪರಿಸರ ರಕ್ಷಣೆಯ ಬಹುಮುಖಿ ಆಯಾಮಗಳು**

ಕೈಗಾರೀಕರಣ ಮತ್ತು ಜನಸಂಖ್ಯೆಯ ಬೆಳವಣಿಗೆಯಿಂದ ಮನುಷ್ಯ ಮತ್ತು ನಿಸರ್ಗದ ನಡುವಣ ಸಮತೋಲನ ತಪ್ಪಿ ಪರಿಸರ ಮಲಿನಗೊಳ್ಳುತ್ತಿದೆ. ಅರಣ್ಯನಾಶದಿಂದ ಅನೇಕ ವನ್ಯಪ್ರಾಣಿ, ಪಕ್ಷಿ, ಜೀವಸಂಕುಲಗಳು ನಿರ್ನಾಮಗೊಳ್ಳುತ್ತಿವೆ. ಮನುಷ್ಯನ ಉಸಿರಾಟಕ್ಕೂ ಸಂಚಕಾರವಾಗುವ ಈ ಪರಿಸರಮಾಲಿನ್ಯ ದಿನನಿತ್ಯದ ಸಮಸ್ಯೆಯಾಗಿದೆ. ಪರಿಸರ ಸಂರಕ್ಷಣೆ ನಿರ್ವಹಣೆಗೆ ಸಂಬಂಧಿಸಿದಂತೆ ಜಗತ್ತಿನ ಎಲ್ಲ ರಾಷ್ಟ್ರಗಳು ಹಲವು ಯೋಜನೆಯನ್ನು ರೂಪಿಸಬೇಕಾಗಿದೆ.

ದೇಶದ ಪ್ರಗತಿಯಲ್ಲಿ ಕೈಗಾರಿಕೆಗಳ ಪಾತ್ರ ಅತ್ಯಂತ ಮಹತ್ವಪೂರ್ಣವಾದದ್ದು. ಕೈಗಾರಿಕಾ ಸಂಸ್ಥೆಗಳು ಪರಿಸರ ಸಂರಕ್ಷಣೆಗಾಗಿ ಉನ್ನತ ಮಾನದಂಡಗಳನ್ನು ಅನುಸರಿಸುವುದು ಅತ್ಯಾವಶ್ಯಕ ಇಂತಹ ಕಾರ್ಖಾನೆಗಳು ಸ್ವಯಂಪ್ರೇರಿತವಾಗಿ ಸುರಕ್ಷತಾ ಕ್ರಮಗಳನ್ನು ಅಳವಡಿಸಿಕೊಳ್ಳುವ ಮೂಲಕ ಪರಿಸರದ ಮೇಲೆ ಬೀರುವ ದುಷ್ಪರಿಣಾಮವನ್ನು ತಡೆಯಬಹುದು. ಹಾಗೆಯೇ ಮಾನವನ ಅನಿಯಂತ್ರಿತ ಚಟುವಟಿಕೆಗಳಿಂದ ಕೆಲವೊಮ್ಮೆ ನಿಸರ್ಗದ ವ್ಯವಸ್ಥೆಯೇ ಪರಿಪೂರ್ಣವಾಗಿ ಬದಲಾಗುತ್ತದೆ.

ಭೂಮಿಯ ಮೇಲೆ ಪ್ರತಿಯೊಂದು ಜೀವಿಯು ಉಳಿವಿಗಾಗಿ ಒಂದು ಜೀವ ಪ್ರಭೇದವು ಮತ್ತೊಂದು ಜೀವ ಪ್ರಭೇದವನ್ನು ಅವಲಂಬಿಸಿದೆ. ಒಂದು ಜೀವಿಯ ಅಳಿವು-ಉಳಿವು ಮತ್ತೊಂದು ಜೀವಿಯ ಅಳಿವು ಉಳಿವನ್ನು ಅವಲಂಬಿಸಿದೆ. ಪರಿಸರದಲ್ಲಿರುವ ಯಾವುದೇ ಪ್ರಾಣಿ, ಪಕ್ಷಿ ಮತ್ತು ಸಸ್ಯಗಳನ್ನು ಸ್ವಾಭಾವಿಕವಾಗಿ ಬೆಳೆಯಲು ಮತ್ತು ಅಭಿವೃದ್ಧಿ

ಹೊಂದಲು ಬಿಡಬೇಕು. ಸ್ವಾಭಾವಿಕ ಬೆಳವಣಿಗೆಗೆ ಅಡ್ಡಿಯುಂಟು ಮಾಡದ ಕ್ರಿಯೆಯಿಂದ ಪರಿಸರದಲ್ಲಿ ಏರುಪೇರುಗಳುಂಟಾಗುತ್ತದೆ.

ಪರಿಸರ ಅಸಮತೋಲನದಿಂದ ನಾನಾ ಸಮಸ್ಯೆಗಳು ಉದ್ಭವಿಸುತ್ತವೆ. ಇದರಿಂದ ಜೀವಿ ಪ್ರಭೇದಗಳ ಮತ್ತು ಅರಣ್ಯನಾಶ, ಪ್ರತಿಕೂಲ ಹವಾಮಾನ ಮಳೆಯ ಅಭಾವ, ಪರಿಸರಮಾಲಿನ್ಯ ಮುಂತಾದ ಗಂಭೀರವಾದ ಸಮಸ್ಯೆಗಳು ಉಂಟಾಗುತ್ತವೆ. ಪರಿಸರ ಅಸಮತೋಲನಕ್ಕೆ ಮಾನವನ ಪ್ರಕೃತಿ ವಿರೋಧಿ ಚಟುವಟಿಕೆಗಳೇ ಕಾರಣವಾಗಿದೆ. ಒಂದು ಕೈಗಾರಿಕೆ ಆರಂಭವಾಗುವ ಮುನ್ನ ಅದರ ಬಗ್ಗೆ ನಾಗರಿಕರ ಅಭಿಪ್ರಾಯ. ಸಲಹೆ, ಸೂಚನೆ, ವಿರೋಧ ಇತ್ಯಾದಿ ಬಗ್ಗೆ ಮಾಹಿತಿ ಸಂಗ್ರಹಿಸಲು ಸರ್ಕಾರ ೨೦೦೬ರಲ್ಲಿ ಸೂಚನೆಯನ್ನು ಹೋರಾಡಿಸಿದೆ. ಇದನ್ನು ಗಮನಿಸಿದರೆ ಪರಿಸರ ರಕ್ಷಣೆಯ ಬಗ್ಗೆ ಸರ್ಕಾರದ ಹಾಗೂ ಅಧಿಕಾರಿಗಳ ಧೋರಣೆ ಇನ್ನೂ ಉತ್ತಮಗೊಳ್ಳಬೇಕಾಗುತ್ತದೆ.[೨೧]

**ಪರಿಸರ ಶಿಕ್ಷಣ**

ಜಗತ್ತಿನಲ್ಲಿರುವ ಮುಂದುವರೆದ ರಾಷ್ಟ್ರಗಳು ಹಿಂದುಳಿದ ರಾಷ್ಟ್ರಗಳು ಎಂಬುದನ್ನು ವ್ಯಾಖ್ಯಾನಿಸಲು ಆಯಾ ರಾಷ್ಟ್ರದಲ್ಲಿರುವ ಜನರು ಎಷ್ಟು ಪ್ರಮಾಣದಲ್ಲಿ ಅಕ್ಷರಸ್ಥರಾಗಿದ್ದಾರೆ. ಇಲ್ಲವೇ ಅನಕ್ಷರಸ್ಥರಾಗಿದ್ದಾರೆ ಎಂಬುದನ್ನು ಮಾನದಂಡವಾಗಿಟ್ಟುಕೊಂಡಿದೆ. ಪ್ರಪಂಚದ ಗಣನೀಯ ಸಂಖ್ಯೆಯ ರಾಷ್ಟ್ರಗಳು ಬಹಳ ಇತ್ತೀಚಿನವರೆಗೂ ಸಕಲ ಸಮಸ್ಯೆಗಳಿಗೆ ಶಿಕ್ಷಣವೇ ಸಂಜೀವಿನಿ ಎಂದು ಪರಿಗಣಿಸಿದೆ. ಕೆಲವು ಹಿಂದುಳಿದ ರಾಷ್ಟ್ರಗಳು ಆ ಅಕ್ಷರ ಜ್ಞಾನಕ್ಕೆ ಏನೇನೂ ಮಹತ್ವ ಕೊಡದೇ ಸಾಗಿಬಂದಿದೆ ಎಂಬುದು ದುರದೃಷ್ಟಕರ ಸಂಗತಿ. ಒಂದು ರಾಷ್ಟ್ರವು ಆದರ್ಶಮಯ ಸುಖೀ ರಾಜ್ಯವಾಗಬೇಕಾದರೆ, ಪ್ರತಿಯೊಬ್ಬ ಪ್ರಜೆಯೂ ತನ್ನ ಹಕ್ಕನ್ನು ಕರ್ತವ್ಯವನ್ನು ಹಾಗೂ ಹೊಣೆಗಾರಿಕೆಗಳನ್ನು ಸರಿಯಾಗಿ ಅನುಷ್ಠಾನಗೊಳಿಸಬೇಕಾದರೆ, ಶಿಕ್ಷಣ ಬಹಳ ಮುಖ್ಯ.

ಶಿಕ್ಷಣವು ಮಾನವನಿಗೆ ಅಗತ್ಯವಾದುದಾಗಿದ್ದು. ಅದಿಲ್ಲದಿದ್ದರೆ ಮನುಷ್ಯ ಅನಾಗರಿಕ-ನಾಗುತ್ತಾನೆ. ಶಿಕ್ಷಣ ಮಾತ್ರವೇ ಅವನನ್ನು ಸಮಾಜಜೀವಿಯಾಗಿ ರೂಪಿಸುತ್ತದೆ. ಪರಿಸರ ಮತ್ತು ಮಾನವ ಪರಸ್ಪರ ಸ್ನೇಹಿಗಳು. ಆದರೆ ಆಧುನಿಕ ಮಾನವ ತನ್ನ ಪರಿಸರಕ್ಕೆ ಕುತ್ತಾಗಿ ಪರಿಣಾಮಿಸಿದ್ದಾನೆ. ಪರಿಸರದಲ್ಲಿ ದೊರೆಯುವ ಎಲ್ಲ ಸಂಪತ್ತನ್ನು ತನಗಾಗಿ ಮುಡಿಪಾಗಿಟ್ಟಿರುವ ಮಾನವ ಪರಿಸರ ನಾಶಕ್ಕೆ ಟೊಂಕಕಟ್ಟಿ ನಿಂತಂತೆ ಭಾಸವಾಗುತ್ತಿದೆ. ಪರಿಸರದ ವಿರುದ್ಧ ಮನುಷ್ಯನ ಆಕ್ರಮಣ ಹೀಗೆ ನಡೆದರೆ ಮುಂದಿನ ಪೀಳಿಗೆ ಪರಿಸರವನ್ನು ಕೇವಲ ಪುಸ್ತಕದಲ್ಲಿ ಹಲವು ಛಾಯಾಚಿತ್ರಗಳಲ್ಲಿ ನೋಡಿ ತಿಳಿದುಕೊಳ್ಳುವ ಸಂದರ್ಭ ಬರಬಹುದು.

ಹಾಗಾಗಿ ಇಂತಹ ಸಂದಿಗ್ಧ ಪರಿಸ್ಥಿತಿಯಿಂದ ಹೊರಬರಬೇಕಾಗಿದೆ. ಅದಕ್ಕಾಗಿ ಪರಿಸರವನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ಪ್ರಯತ್ನ ನಡೆಸಬೇಕಾಗುತ್ತದೆ. ವಿಭಿನ್ನವಾಗಿ ಪರಿಸರವನ್ನು ರಕ್ಷಿಸಿ ಉಳಿಸಬೇಕಾದ ಅನಿವಾರ್ಯತೆಯೂ ಒದಗಿ ಬಂದಿದೆ. ಇದಕ್ಕಾಗಿ ಪರಿಸರಕ್ಕೆ ಸಂಬಂಧಿಸಿದಂತೆ ಹಲವಾರು ಶೈಕ್ಷಣಿಕ ಕೋರ್ಸ್‌ಗಳು ತಲೆ ಎತ್ತಿವೆ. ಪರಿಸರವನ್ನು ಅರ್ಥಮಾಡಿಕೊಳ್ಳುವುದು ಪ್ರತಿಯೊಬ್ಬರ ಆದ್ಯ ಕರ್ತವ್ಯವೂ ಹೌದು. ಪರಿಸರಕ್ಕೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿಗಾಗಿ ಹಲವು ವೆಬ್‌ಸೈಟ್‌ಗಳು ತೆರೆದಿವೆ. ಇತ್ತೀಚೆಗೆ ಸುಪ್ರಿಂಕೋರ್ಟ್ ಪರಿಸರ ಶಿಕ್ಷಣಕ್ಕಾಗಿ ಮಾದರಿ ಪಠ್ಯಕ್ರಮ ರೂಪಿಸುವಂತೆ ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಮಂಡಲಿಗೆ ನಿರ್ದೇಶಿಸಿದೆ. ಪರಿಸರ ಶಿಕ್ಷಣವನ್ನು ನೀಡುವಲ್ಲಿ ಶಾಲಾ ಕಾಲೇಜುಗಳ ಪಾತ್ರ ಪ್ರಮುಖವಾದುದು. ಪರಿಸರ ಸಂರಕ್ಷಣೆ ಮತ್ತು ಸುಧಾರಣೆಗೆ ಅವಶ್ಯಕವಾಗಿರುವುದೇ ಶಿಕ್ಷಣ ಅದರ ಮೌಲ್ಯ ವ್ಯವಸ್ಥೆಯೇ ಬದಲಾವಣೆ ಮತ್ತು ಶಾಲಾ ಕಾಲೇಜುಗಳಲ್ಲಿ ಪರಿಸರ ಸಂರಕ್ಷಣೆ ಬಗ್ಗೆ ಕುರಿತು ಬೋಧಿಸುವುದು ಒಂದು ಅವಿಭಾಜ್ಯ ಅಂಗವಾಗಿದೆ. ಪರಿಸರ ಕುರಿತು ಪೂರಕವಾದ ಪಠ್ಯಪುಸ್ತಕಗಳು ಹಾಗೂ ಆಕರ ಗ್ರಂಥಗಳು ಹಾಗೂ ಗ್ರಂಥಾಲಯಗಳಲ್ಲಿ ಪೂರಕವಾದ ಸಾಮಾಗ್ರಿಗಳನ್ನು ಒದಗಿಸುವುದರಿಂದ ಎಲ್ಲಾ ವಿದ್ಯಾರ್ಥಿಗಳಲ್ಲಿ ಪೂರಕವಾದ ಸಾಮಾಗ್ರಿಗಳನ್ನು ಒದಗಿಸುವುದರಿಂದ ಎಲ್ಲಾ ವಿದ್ಯಾರ್ಥಿಗಳಲ್ಲಿ ಆಸಕ್ತಿ ಮೂಡಿಸುವುದರಿಂದ ಮತ್ತು ಅವರನ್ನು ಈ ವಿಷಯಗಳಲ್ಲಿ ಸರಿಯಾದ ಅರಿವು ಮೂಡಿಸಿ ಅವರನ್ನು ಪ್ರೋತ್ಸಾಹ ನಿಡುವುದು ಶಾಲಾ ಕಾಲೇಜುಗಳಲ್ಲಿ ದೊರೆಯುವ ಶಿಕ್ಷಣದಿಂದ ಮಾತ್ರ ಸಾಧ್ಯ.

ವಿಶ್ವವಿದ್ಯಾನಿಲಯದಲ್ಲಿ ಪರಿಸರ ಶಿಕ್ಷಣದ ಹೊಣೆಗಾರಿಕೆಯನ್ನು ಅಧಿಕೃತವಾಗಿ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗ, ಯು.ಜಿ.ಸಿ.ಯು ಹೊತ್ತಿದೆ. ಅದು ವಿಶ್ವವಿದ್ಯಾನಿಲಯಗಳಿಗೆ ಪರಿಸರ ಶಿಕ್ಷಣದ ಕುರಿತು ಸೂಕ್ತ ಸಲಹೆ ಸೂಚನೆ ಹಾಗೂ ಮಾರ್ಗೋಪಾಯಗಳನ್ನು ಸೂಚಿಸಲು ಒಂದು ಸಮಿತಿಯನ್ನು ನೇಮಕ ಮಾಡಿದೆ. ಈ ನಿಟ್ಟಿನಲ್ಲಿ ಆರು ತಿಂಗಳು ಕಡ್ಡಾಯ ಶಿಕ್ಷಣವನ್ನು "ಕೋರ್ ಮಾಡುಲ್ ಕೋರ್ಸ್ ಇನ್ ಎನ್‌ವಿರೋನ್‌ಮೆಂಟಲ್ ಸ್ಟಡೀಸ್" ಅನ್ನು ಪ್ರಾರಂಭಿಸಿದೆ. ಹೀಗೆ ಹಲವು ರೀತಿಯಲ್ಲಿ ಜಾಗೃತಿ ಮೂಡಿಸಲು ಹಲವು ಶಿಕ್ಷಣ ಸಂಸ್ಥೆಗಳು ಶ್ರಮಿಸುತ್ತಿವೆ.[೨೨]

## ವ್ಯಕ್ತಿಯ ಪಾತ್ರ

ಪ್ರತಿಯೊಬ್ಬ ವ್ಯಕ್ತಿಯೂ ಸಹ ತನ್ನ ಕಡೆಯಿಂದ ಯಾವುದೇ ಮಾಲಿನ್ಯ ಉಂಟಾಗದಂತೆ ಎಚ್ಚರಿಕೆ ವಹಿಸಬೇಕಾಗಿದೆ ಅಥವಾ ಅದು ಅನಿವಾರ್ಯವಾದರೆ ಆದಷ್ಟು ಅದನ್ನು ಕಡಿಮೆ ಮಾಡಬೇಕಾಗಿದೆ. ತಮ್ಮ ಸುತ್ತಮುತ್ತಲಿನ ನೈರ್ಮಲ್ಯದಿಂದ ಕೂಡಿರುವಂತೆ

ನೋಡಿಕೊಳ್ಳುವುದು. ಹಾಗೆಯೇ ಸುತ್ತಮುತ್ತಲಿನ ಸೂಕ್ತ ರೀತಿಯಲ್ಲಿ ಗಿಡಮರಗಳನ್ನು ಬೆಳೆಸಬೇಕಾಗಿದೆ. ಒಬ್ಬ ವ್ಯಕ್ತಿ ತನ್ನ ಜೀವಿತ ಅವಧಿಯಲ್ಲಿ ಕನಿಷ್ಟ ಒಂದು ಮರವನ್ನಾದರೂ ನೆಟ್ಟು ಬೆಳೆಸಬೇಕು.

ಶಾಲಾ ಕಾಲೇಜುಗಳಲ್ಲಿ ಗ್ರಾಮಪಟ್ಟಣಗಳಲ್ಲಿ ಮೊದಲಾದವುಗಳಲ್ಲಿ ಆಗಾಗ್ಗೆ ಪರಿಸರ ಪ್ರಜ್ಞೆಯನ್ನು ಬೆಳೆಸಲು ಅನುವುಮಾಡಿಕೊಡುವ ಪರಿಸರ ಶಿಬಿರ ಕಾರ್ಯಕ್ರಮಗಳನ್ನು ನಡೆಸಬೇಕಾಗಿದೆ. ಮತ್ತು ಪ್ರಭಾವ ಬೀರುವ ಪ್ರಭಾವಯುತವಾದ ಉಪನ್ಯಾಸಗಳು ಭಾಷಣಗಳು ಮಾಡುವುದು. ಕ್ರಿಮಿಕೀಟಗಳನ್ನು ಗುರುತಿಸುವುದು. ವನ್ಯಮೃಗ, ಛಾಯಾಗ್ರಹಣ, ಚಲನಚಿತ್ರಗಳ ಪ್ರದರ್ಶನ ಇವೇ ಮೊದಲಾದ ಆಕರ್ಷಕ ಚಟುವಟಿಕೆಗಳನ್ನು ನಡೆಸಬೇಕಾಗಿದೆ.

ಪರಿಸರ ರಕ್ಷಣೆ ಎನ್ನುವುದು ಕೇವಲ ಪ್ರಚಾರಕಲ್ಲ. ಅದು ಅಂತರಾಳದಿಂದ ಹಂಬಲ ಎಂಬುದನ್ನು ಕಾಯಾ ವಾಚಾ ಮನಸಾ ಪ್ರತಿಯೊಬ್ಬರು ಮಾಡಬೇಕು. ಪ್ರತಿಯೊಬ್ಬರು ತಮ್ಮ ಶಕ್ತಿಮೀರಿ, ಪರಿಸರ ಸಂರಕ್ಷಣೆಗೆ ಶ್ರಮಿಸಬೇಕು. ಪರಿಸರದ ಪ್ರತಿ ಜೀವಸಂಕುಲವನ್ನು ಮನುಷ್ಯ ಮಾನವೀಯತೆಯಿಂದ ಕಾಣುವುದು ಅನಿವಾರ್ಯವಾಗಿದೆ. ವಿದ್ಯುತ್ ಉತ್ಪಾದನೆ ಹಾಗೂ ನೀರಾವರಿ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸುವ ದೃಷ್ಟಿಯಿಂದ ಬೃಹತ್ ಅಣೆಕಟ್ಟುಗಳ ನಿರ್ಮಾಣ ಅಗತ್ಯವೆಂಬುದು ಸತ್ಯ. ಆದರೆ ಅಣೆಕಟ್ಟುಗಳ ನಿರ್ಮಾಣದಿಂದಾಗುವ ಪರಿಸರ ನಾಶ ಪ್ರಕೃತಿಯ ಅಸಮತೋಲನ ಕಾಡನ್ನೇ ತಮ್ಮ ಬದುಕಿನ ಜೀವಾಳವನ್ನಾಗಿ ಮಾಡಿಕೊಂಡಿರುವ ಸಹಸ್ರಾರು ಮುಗ್ಧಜನತೆಯ ಮೇಲೆ ಆಗುವ ಪರಿಣಾಮ ಗಮನಾರ್ಹ. ಅಂತಿಮವಾಗಿ ಪರಿಸರ ಸಂರಕ್ಷಣೆಯ ಬಗ್ಗೆ ಜಾಗೃತಿ ಮೂಡಿಸುವಲ್ಲಿ ವ್ಯಕ್ತಿಯ ಪಾತ್ರ ಬಹಳ ಪ್ರಮುಖವಾದುದು.[೨೩]

## ಜನಜಾಗೃತಿ

ಪರಿಸರದ ಬಗೆಗಿನ 'ಜನಜಾಗೃತಿ' ಅರಿವು ಕಾಳಜಿ, ಪರಿಸರಪ್ರಜ್ಞೆ ಕೇವಲ ಪರಿಸರ ತಜ್ಞರು, ಪರಿಸರ ಪ್ರೇಮಿಗಳು, ಕಾರ್ಯಕರ್ತರು ಅರಣ್ಯ ಇಲಾಖೆಗಳಿಗೆ ಮಾತ್ರ ಸೀಮಿತಗೊಳಿಸದೆ, ಜಗತ್ತಿನಲ್ಲಿ ಹುಟ್ಟಿ ಬೆಳೆಯುವ ಪ್ರತಿಯೊಬ್ಬ ಪುರುಷ ಮತ್ತು ಮಹಿಳೆಗೂ ಅಗತ್ಯವಾಗಿ ಇರಬೇಕಾಗಿದೆ. ಪರಿಸರ ಸಂರಕ್ಷಣೆ ಎಂದರೆ ಅದು ನಮ್ಮ ರಕ್ಷಣೆಯೇ ಆಗಿದೆ. ಪರಿಸರ ಸಂರಕ್ಷಣೆಯಲ್ಲಿ ನಮ್ಮ ಉಳಿವು ಅಡಗಿದೆ. ಓಝೋನ್ ಪದರದಲ್ಲಿ ರಂಧ್ರವಾಗಿರುವುದು, ಆಮ್ಲಮಳೆ ಸುರಿಯುವುದು ಈ ರೀತಿ ಮನುಕುಲಕ್ಕೆ ಕಂಟಕಪ್ರಾಯವಾಗಿ ಭೀಕರ ಪರಿಸರ ಸಮಸ್ಯೆಗಳಾಗಿವೆ. ಪರಿಸರ ಮಾಲಿನ್ಯ ಬರೀ ಉದ್ಯಮಿಗಳಿಂದಲೇ ಆಗುತ್ತಿದೆ.

ಹಾಗಾಗಿ ಪರಿಸರ ಸಂರಕ್ಷಣೆಯ ಕಾರ್ಯವೂ ಉದ್ಯಮಿಗಳಿಂದಲೇ ನಡೆಯಬೇಕೆಂಬುದು ಸರಿಯಲ್ಲ. ಎಲ್ಲರಲ್ಲೂ ಪರಿಸರ ಸಂರಕ್ಷಣೆಯ ಜಾಗೃತಿ ಮೂಡಿದಾಗ ಮಾತ್ರ ಮಾಲಿನ್ಯ ತಡೆಯಲು ಸಾಧ್ಯ.

ಪರಿಸರ ಸಂರಕ್ಷಣೆ ಎನ್ನುವುದು ಕೇವಲ ಪ್ರಚಾರಕ್ಕಲ್ಲ. ಅದುಅಂತರಾಳದ ಹಂಬಲವಾಗಬೇಕು. ಕಾಯಾ, ವಾಚಾ, ಮನಸಾ ಪ್ರತಿಯೊಬ್ಬರು ಶ್ರಮಿಸಬೇಕು. ತಮ್ಮ ತಮ್ಮ ಸುತ್ತಮುತ್ತಲಿನ ಬಗ್ಗೆ ಜಾಗೃತಿ ಹೊಂದಬೇಕು. ಹಾಗೆಯೇ ಅವರ ಹೊಲ, ಗದ್ದೆಗಳಲ್ಲಿ ಮತ್ತು ಸೂಕ್ತ ಪ್ರದೇಶಗಳಲ್ಲಿ ಸೂಕ್ತ ರೀತಿಯಲ್ಲಿ ಸಸ್ಯಸಂಪತ್ತನ್ನು ಬೆಳೆಸಲು ಶಕ್ತಿಮೀರಿ ಶ್ರಮಿಸಬೇಕಾದದ್ದು ಪ್ರತಿಯೊಬ್ಬ ಪ್ರಜೆಯ ಕರ್ತವ್ಯ.

**ಪರಿಸರ ಸಂರಕ್ಷಣೆಯಲ್ಲಿ ತಂತ್ರಜ್ಞಾನದ ಪಾತ್ರ**

ಸಮಾಜದ ಅಭಿವೃದ್ಧಿಯ ಪ್ರತಿ ಹಂತದಲ್ಲಿಯೂ ಮಾಹಿತಿ ನೀಡಲು ತಂತ್ರಜ್ಞಾನ ಪಾತ್ರ ಮಹತ್ವದ್ದಾಗಿದೆ. ಪ್ರಪಂಚದ ಆಗುಹೋಗುಗಳ ಬಗ್ಗೆ ದಿನನಿತ್ಯವೂ ಮಾಹಿತಿಯನ್ನು ಅರಿಯಲು ಅವನಿಗೆ ತಂತ್ರಜ್ಞಾನದ ಅವಶ್ಯಕತೆಯಿದೆ. ಸಮಾಜದ ಎಲ್ಲಾ ಕ್ಷೇತ್ರಗಳಿಗೂ ಅದರ ಅವಶ್ಯಕತೆ ಅನಿವಾರ್ಯ. ವಿಜ್ಞಾನ ಮತ್ತು ತಾಂತ್ರಿಕ ಜ್ಞಾನಗಳ ತಿಳಿವಳಿಕೆಯಿಂದ ಮಾತ್ರ ಜನರು ತಮ್ಮ ಮೌಢ್ಯವನ್ನು ಬಿಟ್ಟು ವಾಸ್ತವಿಕ ಅರಿವನ್ನು ಪಡೆದುಕೊಳ್ಳಬಹುದಾಗಿದೆ. ಪರಿಸರ ಕ್ಷೇತ್ರದಲ್ಲಿ ಆಗಿರುವ ವಿವಿಧ ಸಂಶೋಧನೆಗಳು, ಪ್ರಯೋಗಗಳು, ಸಾಧನೆಗಳು ಮೊದಲಾದವು-ಗಳನ್ನು ಜನರು ಸುಧಾಪತ್ರಿಕೆ, ರೇಡಿಯೋ ಟೆಲಿವಿಷನ್ ಮೊದಲಾದವುಗಳ ಮೂಲಕ ತಿಳಿದುಕೊಳ್ಳುತ್ತಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ತಂತ್ರಜ್ಞಾನ ಸಹ ವಿಶೇಷವಾಗಿ ಸೇರ್ಪಡೆಗೊಂಡಿದೆ. ಯಾವುದೇ ವಿಷಯದ ಬಗ್ಗೆ ಮಾಹಿತಿ ಕಲೆಹಾಕಬೇಕಾದರೆ ಶೀಘ್ರವಾಗಿ ಕ್ಷಣಮಾತ್ರದಲ್ಲಿ ಅದರ ಬಗ್ಗೆ ಮಾಹಿತಿಯನ್ನು ಒದಗಿಸುವುದು ಕೇವಲ ತಂತ್ರಜ್ಞಾನದಲ್ಲಿ.

ನಮ್ಮ ಪರಿಸರಕ್ಕಾಗಿ ಏನಾದ್ರೂ ಮಾಡಬೇಕು ಅಂತಾ ಪ್ರತಿಯೊಬ್ಬರೂ ಅಂದುಕೊಳ್ಳುತ್ತಾರೆ. ಆದ್ರೆ ಏನು ಮಾಡಬೇಕು? ಎಂಬುದು ಗೊತ್ತಾಗುವುದಿಲ್ಲ ಮತ್ತು ಪರಿಸರವನ್ನು ಯಾವ ರೀತಿಯಲ್ಲಿ ಸಂರಕ್ಷಣೆ ಮಾಡಬಹುದು. ಅದರಿಂದ ಆಗುವ ಪ್ರಯೋಜನಗಳು ಜೀವಸಂಕುಲಗಳ ಮಾಹಿತಿ, ಪ್ರಾಣಿಪಕ್ಷಿಗಳ ಬಗ್ಗೆ ಮಾಹಿತಿ ಎಲ್ಲಾವನ್ನು ನಾವು ಕ್ಷಣಾರ್ಧದಲ್ಲಿ ಮಾಹಿತಿಯನ್ನು ಸಂಗ್ರಹಿಸಬಹುದು ಮತ್ತು ಪರಿಸರ ಸಂರಕ್ಷಣೆಯ ಬಗ್ಗೆ ಜಾಗೃತಿ ಮೂಡಿಸಲು ತಂತ್ರಜ್ಞಾನ ಬಹಳ ಪ್ರಯೋಜನವಾಗಿದೆ.[೨೪]

**ಸಮೂಹ ಮಾಧ್ಯಮಗಳ ಪಾತ್ರ**

ಪರಿಸರ ಸಂರಕ್ಷಣೆಗೆ ಆಕಾಶವಾಣಿ, ದೂರದರ್ಶನ ಅದರ ವಿವಿಧ ವಾಹಿನಿಗಳು ಮೊದಲಾದ ಸಮೂಹ ಮಾಧ್ಯಮಗಳ ಪಾತ್ರ ಪ್ರಮುಖವಾದದು. ಪರಿಸ್ಥಿತಿಯ

ಇತಿಮಿತಿಗಳನ್ನರಿತು ಪ್ರಾಮಾಣಿಕ ಪ್ರಯತ್ನ ಮಾಡುವುದಾದರೆ ದೇಶದ ಒಟ್ಟಾರೆ ಅಭಿವೃದ್ಧಿ ಸಾಧಿಸಲು ಅದರಲ್ಲಿಯೂ ಪರಿಸರ ಸಂರಕ್ಷಣೆ ಕಾರ್ಯವನ್ನು ಸಾಕಷ್ಟು ಪ್ರಮಾಣದಲ್ಲಿ ಸಾಧಿಸಲು ಸಮೂಹ ಮಾಧ್ಯಮಗಳ ಅಪೂರ್ವ ಅವಕಾಶವನ್ನು ಒದಗಿಸಬಹುದಾಗಿದೆ. ಆ ದೆಸೆಯಲ್ಲಿ ಅವಶ್ಯಕವಾದ ಜನಜಾಗೃತಿ ಚಿಂತನೆ ಹಾಗೂ ಸಾಮಾಜಿಕ ಬದಲಾವಣೆಗಳನ್ನು ಉಂಟುಮಾಡುವಲ್ಲಿ ಮಹತ್ತರ ಪಾತ್ರವನ್ನು ವಹಿಸಬಹುದಾಗಿದೆ. ಪ್ರಸ್ತುತವಾಗಿರುವ ಆರ್ಥಿಕ ರಾಜಕೀಯ, ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ ಮುಂತಾದ ವ್ಯವಸ್ಥೆಗಳನ್ನು ತಿದ್ದಿ ಹೊಸರೂಪಕೊಟ್ಟು ಹೆಚ್ಚು ವ್ಯಾಪಕವಾದ ಹಾಗೂ ಅರ್ಥಪೂರ್ಣವಾದ ಮೌಲ್ಯಗಳನ್ನು ಬಿತ್ತಿ ಬೆಳೆಸಬಹುದಾಗಿದೆ. ಪರಿಸರ ಸಂರಕ್ಷಣಾ ಕಾರ್ಯದ ಅನಿವಾರ್ಯತೆಯನ್ನರಿತು ಅದಕ್ಕೆ ಸಂಬಂಧಿಸಿದ ಅರ್ಥಪೂರ್ಣ ಚಟುವಟಿಕೆಗಳಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಪಾಲ್ಗೊಂಡು ತನ್ನ ಒಳಿತಿನ ಜೊತೆಗೆ ರಾಷ್ಟ್ರೀಯ ಪ್ರಗತಿಹೊಂದಲು ಸಕ್ರಿಯವಾಗಿ ಸಹಕರಿಸುವಂತೆ ಮಾಡಬಹುದಾಗಿದೆ.

ನಮ್ಮ ರಾಜ್ಯ ರಾಷ್ಟ್ರದಲ್ಲಿಯೇ ಅಲ್ಲದೇ ಜಗತ್ತಿನಾದ್ಯಂತ ಬಹಳವಾಗಿ ಚರ್ಚೆ-ಯಾಗುತ್ತಿರುವ ವಿಷಯವಾಗಿರುವ ಹವಾಮಾನ ವೈಪರೀತ್ಯ ಅಥವಾ ಹೆಚ್ಚುತ್ತಿರುವ ಭೌಗೋಳಿಕ ತಾಪಮಾನ ಮಾನವನ ಅತಿಯಾದ ದುರಾಸೆಯಿಂದ ಸ್ವಾರ್ಥಸಾಧನೆಯಿಂದ ಪರಿಸರಕ್ಕೆ ಆಗುತ್ತಿರುವ ಹಾನಿಕಾರಕ ವಿಷಯಗಳಲ್ಲಿ ಇದೂ ಒಂದು. ಹೆಚ್ಚುತ್ತಿರುವ ತಾಪಮಾನದಿಂದ ಮನುಕುಲಕ್ಕೆ ಸಂಚಕಾರವಿಲ್ಲದೆ ವೈವಿಧ್ಯತೆಗಳಿಂದ ಕೂಡಿದ ಪರಿಸರದಲ್ಲಿ ಸಹಸ್ರಾರು ಜೀವರಾಶಿಗಳಿಗೂ ಸಂಚಕಾರ ಬಂದೊದಗಿದೆ. ಇದನ್ನು ತಡೆಯಲು ಹಲವಾರು ಪ್ರಯತ್ನಗಳು ನಡೆಯುತ್ತಿವೆ.

ನಮ್ಮಲ್ಲಿ ಪರಿಸರ ಸಂರಕ್ಷಣೆಗಾಗಿ ಸದಾ ಕಾಳಜಿ ವಹಿಸುವಂತಹ ಪರಿಸರವಾದಿಗಳು ಮತ್ತು ವಿಜ್ಞಾನಿಗಳು ಇದ್ದಾರೆ. ಹವಾಮಾನದ ವೈಪರೀತ್ಯದ ಬಗ್ಗೆ ಪರಿಸರ ಮಾಲಿನ್ಯದ ಬಗ್ಗೆ ಏನೂ ಗೊತ್ತಿಲ್ಲದ ಶ್ರೀಸಾಮಾನ್ಯರು ಇದ್ದಾರೆ. ಇವರ ನಡುವೆ ಸಂಪರ್ಕ ಬೆಸೆಯುವ ಕೊಂಡಿಯಂತೆ ಕಾರ್ಯನಿರ್ವಹಿಸುವ ಸಮೂಹಮಾಧ್ಯಮಗಳು ಗಣನೀಯವಾಗಿದೆ. ಇವರೆಲ್ಲರ ಪ್ರಾಮಾಣಿಕ ಪ್ರಯತ್ನದಿಂದ ಹವಾಮಾನ ವೈಪರೀತ್ಯ ಮತ್ತು ಅದರಿಂದಾಗುವ ಪರಿಣಾಮ ತಡೆಯಲು ಸಾಧ್ಯವಾಗಬಹುದು.

ನಮ್ಮ ದೇಶದಲ್ಲಿ ಪರಿಸರ ಸಂರಕ್ಷಣೆಗಾಗಿ ಹಲವು ಚಳವಳಿಗಳು ನಡೆದಿವೆ. ಚಿಪ್ಕೊ ಚಳವಳಿ ಅಪ್ಪಿಕೋ ಚಳವಳಿ, ಸತ್ಯಾಗ್ರಹ, ನರ್ಮದಾ ಬಚಾವೋ, ಆಂದೋಲನಾ ಮೊದಲ ಪರಿಸರ ಚಳವಳಿಗಳು ನಡೆದಿವೆ. ಇವುಗಳ ಉದ್ದೇಶ ಪರಿಸರ ಸಂರಕ್ಷಣೆಗಾಗಿ, ಹೋರಾಟಗಳು ಸಾಕಷ್ಟು ಯಶಸ್ಸು ಕಂಡಿವೆ. ಸಮೂಹ ಮಾಧ್ಯಮಗಳು ನೀಡಿರುವ ಪ್ರೋತ್ಸಾಹ ಸಹಕಾರವನ್ನು

ಅಲ್ಲಗಳೆಯುವಂತಿಲ್ಲ. ಪರಿಸರವಾದಿಗಳು ಜನಪರ ಹೋರಾಟಗಾರ ಸುಂದರಲಾಲ್ ಬಹುಗುಣ, ಮೇಧಾ ಪಾಟ್ಕರ್, ವಂದನಾಶಿವ ಮುಂತಾದವರು ಪರಿಸರ ಸಂರಕ್ಷಣೆಗಾಗಿ ಶ್ರಮವಹಿಸಿದ್ದಾರೆ ಮತ್ತು ಹೋರಾಟ ಮಾಡಿದ್ದಾರೆ.

**ಸ್ವಯಂ ಸೇವಾ ಸಂಘಟನೆಗಳ ಪಾತ್ರ**

ನಮ್ಮ ಭಾರತ ದೇಶದಲ್ಲಿಯೂ ಸಹ ಸಹಸ್ರಾರು ಸ್ವಯಂ ಸೇವಾ ಸಂಘಟನೆಗಳು ಅಥವಾ ಸರ್ಕಾರೇತರ ಸಂಸ್ಥೆಗಳು ಎನ್.ಜಿ.ಓ.ಗಳ ಪಾತ್ರ ಅಸ್ತಿತ್ವದಲ್ಲಿದೆ. ಇಂತಹ ಸ್ವಯಂ ಸೇವ ಸಮಾಜ ಕಲ್ಯಾಣ ನಿಯೋಗಗಳು ಪರಿಸರ ಸಂರಕ್ಷಣೆ ಪರಿಸರ ಸ್ವಚ್ಛತೆ, ನೈರ್ಮಲ್ಯ ಆರೋಗ್ಯ, ಶಿಕ್ಷಣ ಹೀಗೆ ಹತ್ತು ಹಲವು ಯೋಜನೆಗಳನ್ನು ಹಮ್ಮಿಕೊಂಡು ಅವುಗಳನ್ನು ಕಾರ್ಯರೂಪಕ್ಕೆ ತರುತ್ತವೆ. ಕೇಂದ್ರ ಹಾಗೂ ರಾಜ್ಯಸರ್ಕಾರಗಳ ಹಣಕಾಸಿನ ನೆರವಿನಿಂದ ಈ ಸಂಸ್ಥೆಗಳು ನಡೆಯುತ್ತಿವೆ. ಪ್ರಸ್ತುತವಾಗಿ ಕಂಡುಬರುವಂತೆ ಪರಿಸರ ಸಂರಕ್ಷಣೆ ಜೀವವೈವಿಧ್ಯಗಳ ಸಂರಕ್ಷಣೆಯ ಕೆಲಸ ಅಷ್ಟು ಸುಲಭವಲ್ಲ. ಹಾಗಾಗಿ ಸರ್ಕಾರ ವತಿಯಿಂದ ಬರುವ ಹಲವು ಸೌಲಭ್ಯಗಳನ್ನು ಪಡೆದು ಸರ್ಕಾರದ ಹಲವು ಯೋಜನೆಗಳು ಜನರ ಮನಮುಟ್ಟಲು ಸಾಧ್ಯವಾಗುವುದಿಲ್ಲ. ಅದನ್ನೆಲ್ಲ. ಈ ಸ್ವಯಂ ಸೇವಾಸಂಸ್ಥೆಗಳು ಅದನ್ನು ದುರುಪಯೋಗ ಮಾಡಿಕೊಳ್ಳದೇ ಜನರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ಮಾಡಬೇಕು. ಈ ಜೀವವೈವಿಧ್ಯದ ಪ್ರಮುಖ ನೆಲೆಯಲ್ಲಿ ಒಂದಾಗಿರುವ ಉತ್ತರ ಕನ್ನಡ ಜಿಲ್ಲೆಯ ಎನ್.ಜಿ.ಓ.ಗಳಿಂದ ಪರಿಸರ ಸಂರಕ್ಷಣೆಯ ಕಾರ್ಯ ಗಣನೀಯವಾಗಿ ನಡೆಯುತ್ತಿರುವುದನ್ನು ಕಾಣಬಹುದು. ಇತ್ತೀಚೆಗೆ ಇಂತಹ ಸಂಘಟನೆಗಳು ಹೆಚ್ಚುತ್ತಿದ್ದರೂ ಜನರ ಮತ್ತು ಪರಿಸರ ಸಮಸ್ಯೆಗಳನ್ನು ನಿವಾರಿಸಲು ಇವುಗಳೂ ದಿನಕಳೆದಂತೆ ವಿಫಲವಾಗುತ್ತಿವೆ ಎಂಬುವುದು ಬೇಸರದ ಸಂಗತಿ.

ಪ್ರತಿವರ್ಷ ಭಾರತದ ಸ್ವಯಂ ಸೇವಾಸಂಸ್ಥೆಗಳಿಗೆ ವಿದೇಶಗಳಿಂದ ಹಣದ ನೆರವು ಹರಿದುಬರುತ್ತದೆ ಎಂಬುವುದು ಅಧಿಕೃತ ಮಾಹಿತಿ. ಅಮೇರಿಕಾ, ಯುರೋಪ್ ರಾಷ್ಟ್ರಗಳಿಂದ ಬಂದಂತಹ ಹಣವನ್ನು ಭಾರತದಲ್ಲಿ ಸ್ವೀಕರಿಸುವ ಸ್ವಯಂ ಸೇವಾ ಸಂಘಟನೆಗಳ ಪೈಕಿ ಕ್ರೈಸ್ತಮಿಷನರಿಗಳು ಅಥವಾ ಚರ್ಚ್ ಪ್ರಯೋಜಿತ ಸಂಘ ಸಂಸ್ಥೆಗಳೇ ಹೆಚ್ಚು. ವಿದೇಶದಿಂದ ಬಂದಂತಹ ಹಣವನ್ನು ಸಮಾಜ ಸೇವೆಗೆ ಅಥವಾ ಪರಿಸರ ಸಂರಕ್ಷಣೆಗೆ ಇಂತಹ ಕಾರ್ಯಕ್ರಮಗಳಿಗೆ ಬಳಸದೇ ಕೇವಲ ಕ್ರೈಸ್ತಮಿಷನರಿ ಪ್ರಚಾರ ಮತ್ತು ಮತಾಂತರ ಪ್ರಕ್ರಿಯೆಗಾಗಿ ಬಳಸುವುದು ಅದು ಕಾನೂನು ಬಾಹಿರ ಮತ್ತು ನಮ್ಮ ದೇಶದ ದುರದೃಷ್ಟಕರ ಸಂಗತಿ. ಈ ರೀತಿ ದುರುಪಯೋಗವಾಗದಂತೆ ನೋಡಿಕೊಳ್ಳುವುದು ಸರ್ಕಾರದ ಆದ್ಯಕರ್ತವ್ಯ. ಇಂತಹ ಅಂಶಗಳೆಲ್ಲನೆಲ್ಲಾ ನಾಗೇಶ್ ಹೆಗಡೆ ಅವರು ತಮ್ಮ ಲೇಖನಿಯಲ್ಲಿ ಉಲ್ಲೇಖಿಸಿ ಇಂತಹ ಡೋಂಗೀ ಸ್ವಯಂ ಸಂಘಟನೆಗಳ ವಿರುದ್ಧ ಹೋರಾಟವನ್ನು ಮಾಡುತ್ತ ಬಂದಿದ್ದಾರೆ.[೨೫]

## ಹವಾಮಾನ ತಗ್ಗಿಸುವಲ್ಲಿ ವಿಶ್ವಸಂಸ್ಥೆಯ ಪಾತ್ರ

ಹುಟ್ಟು-ಬದುಕು-ಸಾವು ಎಲ್ಲ ಇಲ್ಲೇ ಈ ಭೂಮಿಯಲ್ಲೇ. ಅನಗ್ಯಗ್ರಹದಲ್ಲಿ ವಾಸಸ್ಥಾನ ಏರ್ಪಡಿಸಿಕೊಳ್ಳುವುದು ಸಾಧ್ಯವಾಗುತ್ತದೆಯೋ ಇಲ್ಲವೋ ತಿಳಿದಿಲ್ಲ. ಸಾಧ್ಯವಾದರೂ ಪ್ರಕ್ರಿಯೆಗೆ ಶತಮಾನಗಳೇ ಬೇಕಾಗುತ್ತವೆ. ಮನುಷ್ಯರ ಅಸ್ತಿತ್ವಕ್ಕೆ ಮೂಲಾಧಾರವಾದ ಭೂಮಿತಾಯಿ ಮನುಷ್ಯರ ನೀಚಕೃತ್ಯಗಳಿಗೆ ಬೇಸತ್ತು ಕೋಪಗೊಂಡು ಬಿಸಿಯಾಗುತ್ತಿದ್ದಾಳೆ. ಭೂತಾಪಮಾನ ಏರಿಕೆಯಾಗುತ್ತಿದೆ. ಇದರಿಂದ ಜೀವಜಗತ್ತಿಗೆ ಆಪತ್ತು ತಪ್ಪಿದ್ದಲ್ಲ.

೧೮೯೬ರಲ್ಲೇ ಸ್ವಾಂತೆ ಆಗಸ್ಟ್ ಅರ್ಹೆನಿಯಸ್ ಅವರು ಭೂ ತಾಪಮಾನ ಹೆಚ್ಚುತ್ತಿರುವ ಬಗ್ಗೆ ಮುನ್ನೆಚ್ಚರಿಕೆ ನೀಡಿದ್ದರು. ಆದರೆ ಅದರ ಪ್ರಾಮುಖ್ಯತೆಯನ್ನರಿಯಲು ಪ್ರಪಂಚಕ್ಕೆ ಒಂದು ಶತಮಾನ ಬೇಕಾಯಿತು. ಹವಾಮಾನ ವೈಪರೀತ್ಯದಿಂದ ಜೀವಜಗತ್ತಿಗೆ ಬಂದೆರಗಿರುವ ವಿಪತ್ತನ್ನು ತಪ್ಪಿಸಲು ವಿಶ್ವಸಂಸ್ಥೆಯ ನೇತೃತ್ವದಲ್ಲಿ ಕಳೆದ ಒಂದು ದಶಕದಿಂದ ಪ್ರಯತ್ನಗಳು ನಡೆಯುತ್ತಲೇ ಇದೆ. ಆದರೆ ಆ ಪ್ರಯತ್ನಗಳು ಸಫಲವಾಗಿಲ್ಲ. ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ನಡುವೆ ಉಂಟಾಗಿರುವ ಭಿನ್ನಾಭಿಪ್ರಾಯಗಳೇ ಎಲ್ಲ ಯತ್ನಗಳು ವಿಫಲವಾಗಲು ಕಾರಣ. ಆದರೆ ಪ್ರಯತ್ನಗಳು ನಿಂತಿಲ್ಲ. ಭಿನ್ನಾಭಿಪಾಯಗಳನ್ನು ತಗ್ಗಿಸಿ ಒಮ್ಮತದ ಕಾರ್ಯಕ್ರಮವನ್ನು ರೂಪಿಸುವ ದೆಸೆಯಲ್ಲಿ ವಿಶ್ವಸಂಸ್ಥೆಯ ಮುಖ್ಯಸ್ಥ ಜಾನ್-ಕಿಮೂನ್, ನ್ಯೂಯಾರ್ಕ್‌ನಲ್ಲಿ ಆಯೋಜಿಸಿದ್ದ ಶೃಂಗಸಭೆಯಲ್ಲಿ ವಿದೇಶಾಂಗ ಸಚಿವರು ಮತ್ತು ಪರಿಸರಖಾತೆ ಸಚಿವರು ಹಲವು ದೇಶಗಳಿಂದ ಪ್ರತಿನಿಧಿಸಿದ್ದರು. ಮತ್ತೊಂದು ವಿಶೇಷವೆಂದರೆ ೩ ಬಿಲಿಯನ್ ಮಕ್ಕಳ ಪ್ರತಿನಿಧಿಯಾಗಿ ಲಕ್ನೋದ ೧೩ ವರ್ಷದ ಬಾಲಕಿ ಯುಗರತ್ನ ಶ್ರೀ ವಾಸ್ತವ ವಿಷಯವನ್ನು ಮಂಡಿಸಿದರು.

ಈ ಶೃಂಗಸಭೆಯಲ್ಲಿ ಭಾಷಣ-ಚರ್ಚೆಯನ್ನು ಗಮನಿಸಿದ್ದಾರೆ ಮತ್ತು ಅಮೇರಿಕಾ ಅಧ್ಯಕ್ಷ ಮತ್ತು ಇತರೆ ಪ್ರಪಂಚ ನಾಯಕರು ಮಾಡಿದ ಭಾಷಣಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಸ್ವಲ್ಪ ನಿರುತ್ಸಾಹ ಮೂಡುತ್ತದೆ. ಚೈನಾ-ಜಪಾನ್ ಮುಂತಾದ ದೇಶಗಳ ವೈಖರಿ ನೋಡಿದರೆ ಬರುವ ದಿನಗಳಲ್ಲಿ ಶೃಂಗಸಭೆಯಲ್ಲಿ ನಡೆಯುವ ಚರ್ಚೆಯಲ್ಲಿ ಅವರದೇ ಆದ ವಾದ ಮಂಡಿಸಲು ಮುಂದಾಗುವ ಮುನ್ಸೂಚನೆ ಕಾಣುತ್ತೇವೆ. ಆಯಾದೇಶಗಳು ಅದರದೇ ಆದ ಸ್ವಂತ ಕಾನೂನುಗಳನ್ನು ರೂಪಿಸಿಕೊಳ್ಳುವ ಹಕ್ಕುಗಳನ್ನು ಕೋರುವ ರಾಜಕೀಯ ಒಪ್ಪಂದ ಏರ್ಪಡುವ ಸಂಬಂಧವಿದೆ.

ಇಂಗಾಲದ ಡೈ-ಆಕ್ಸೈಡ್‌ನ್ನು ಅತ್ಯಧಿಕವಾಗಿ ಬಿಡುಗಡೆಗೊಳಿಸುತ್ತಾ ಜಾಗತಿಕ ತಾಪಮಾನ ಏರಿಕೆಗೆ ಪ್ರಮುಖ ಕಾರಣಕರ್ತರಾಗಿರುವ ಮುಂದುವರೆದ ದೇಶಗಳು

ಪರಿಸ್ಥಿತಿಯನ್ನು ಹತೋಟಿಯಲ್ಲಿಡಲು ಈಗಾಗಲೇ ಸಾಕಷ್ಟು ಶ್ರಮಪಟ್ಟಿರುವುದಾಗಿ ಶೃಂಗಸಭೆಯಲ್ಲಿ ಹೇಳಿಕೆಯನ್ನಿತ್ತಿವೆ. ಹಾಗೆಯೇ ಭವಿಷ್ಯತ್ ಪ್ರಣಾಳಿಕೆಗಳ ಬಗ್ಗೆ ಮಾತಾಡಿ ಶುದ್ಧವಾದ ಇಂಧನಕ್ಕೋಸ್ಕರ ಹೆಚ್ಚು ಹಣ ವ್ಯಯಿಸುವುದಾಗಿ, ವಾಹನಗಳಿಗೆ ಹೊಸ ಇಂಧನ ಸಾಮರ್ಥ್ಯ ಪ್ರಮಾಣಗಳನ್ನು ನಿರ್ದೇಶಿಸಿರುವುದಾಗಿಯೂ, ಹೊಗೆ ನಿಯಂತ್ರಣಕ್ಕೆ ತೀಕ್ಷ್ಣವಾದ ಕಾನೂನುಗಳನ್ನು ಮಾಡುವುದಕ್ಕಾಗಿ ವಿಶ್ವಸಂಸ್ಥೆ ಬದ್ಧವಾಗಿದೆ. ಕಾಡಿನ ವಿಸ್ತೀರ್ಣವನ್ನು ಹೆಚ್ಚಿಸುವುದಕ್ಕೆ ಪ್ರಯತ್ನಿಸುವುದಾಗಿಯೂ ಎಲ್ಲಾ ರಾಷ್ಟ್ರಗಳು ಒಮ್ಮತ ಅಭಿಪ್ರಾಯಕ್ಕೆ ಬಂದಿವೆ.

ಕಾಲವು ಮೀರಿ ಹೋಗಿರುವುದರಿಂದ ಸ್ವಹಿತಾಸಕ್ತಿಯನ್ನು ಬದಿಗೊತ್ತಿ ಎಲ್ಲಾ ದೇಶಗಳು ಧೈರ್ಯವಾಗಿ ಸಂಯುಕ್ತವಾಗಿ ಮುಂದಡಿಯಿಡುವ ಸಮಯ ಬಂದಿದೆ. ಅಭಿವೃದ್ಧಿ ಹೊಂದಿದ ದೇಶಗಳು ಜೀವನ ಶೈಲಿಯನ್ನು ಬದಲಾಯಿಸಿಕೊಳ್ಳುವ ಮೂಲಕ ವಾತಾವರಣಕ್ಕೆ ವಿಪರೀತವಾಗಿ ಹೋರಸೂಸುತ್ತಿರುವ ಇಂಗಾಲದ ಪ್ರಮಾಣವನ್ನು ಗಣನೀಯವಾಗಿ ಕಡಿಮೆ ಮಾಡಬಹುದು.

ದೇಶಿಯ ಹಿತಕ್ಕಿಂತ ವಿಶ್ವಹಿತ ಈಗ ಮುಖ್ಯವೆಂದು ಅದಕ್ಕೆ ಅವಶ್ಯವಾದರೆ ಕೆಲವು ಸಣ್ಣಪುಟ್ಟ ತ್ಯಾಗಗಳಿಗೂ ದೇಶಗಳಿಗೂ ಸಿದ್ಧವಾಗಿರಬೇಕೆಂದು ವಿಶ್ವಸಂಸ್ಥೆಯ ಕಾರ್ಯದರ್ಶಿ ಬಾನ್–ಕಿ–ಮೂನ್ ರವರ ಹಿತವಚನವಾಗಿತ್ತು.

ದಿನೇ ದಿನೇ ಬದಲಾಗುತ್ತಿರುವ ಜಾಗತಿಕ ಹವಾಮಾನ ವೈಪರೀತ್ಯವನ್ನು ತಡೆಯುವ ನಿಟ್ಟಿನಲ್ಲಿ ತಕ್ಷಣ ಕ್ರಮಕೈಗೊಳ್ಳುವ ಅಗತ್ಯ ಇದೆ. ಹವಾಮಾನ ವೈಪರೀತ್ಯ ಕುರಿತು ನಮಗೆ ಅತ್ಯಂತ ಕಾಳಜಿ ಅವಶ್ಯಕ. ನಮ್ಮ ಮುಂದಿನ ಪೀಳಿಗೆಗಾಗಿ ಎಂಬುದನ್ನು ಅರಿಯಬೇಕು. ಭೂಮಿ ಎಲ್ಲರಿಗೂ ಸಂತೃಪ್ತಿ ನೀಡಿದೆ. ಆದರೆ ಎಲ್ಲಾರು ದುರಾಸೆಯಿಂದ ಕೂಡಿದ್ದಾರೆ. ಮಾನವ ಪ್ರತಿ ದಿನ ಪರಿಸರದ ಮೇಲೆ ದೌರ್ಜನ್ಯ ಮಾಡುತ್ತಿರುವುದು ವಿಪರ್ಯಾಸ.[೨೬]

## ಕೊನೆಟಿಪ್ಪಣಿಗಳು

೧. ಬೈಲೂರು ನಾರಾಯಣ ತಂತ್ರಿ, ಸಂಸ್ಕಾರ, ಪಾರಿಜಾತ, ಪು. ೩೧
೨. ಶಿವರಾಮಯ್ಯ ಸಾಹಿತ್ಯ ಪರಿಸರ, ಪು. ೬೪
೩. ಬರಗೂರು ರಾಮಚಂದ್ರಪ್ಪ, ಸಂಸ್ಕೃತಿ ಶ್ರಮ ತತು ಸೃಜನಶೀಲತೆ, ಭೂಮಿ ತನ್ನ ಮಾತು, ಪು. ೫
೪. ಕುವೆಂಪು, ಪಕ್ಷಿಕಾಶಿ, ಪು. ೨೧
೫. ಅಂಬಿಕಾತನಯದತ್ತ, ಅರುಳು ಮರುಳು, ಪು. ೪೧
೬. ಚಂದ್ರಶೇಖರ ನಂಗಲಿ, ಭೂಮಿಗೀತೆ, ಪು. ೩೫
೭. ಅದೇ., ಪು. ೮೭
೮. ಕುಂ. ವೀರಭದ್ರಪ್ಪ, ಭಗವತಿ ಕಾಡು, ಪು. ೧೧೪
೯. ನಾಗೇಶ್ ಹೆಗಡೆ, ಇರುವುದೊಂದೆ ಭೂಮಿ, ಪು. ೭೪
೧೦. ಭೂಮಿತಾಯಿ, ಔದುಂಬರ ಗಾಥೆ, ಸಂಪುಟ – ೪
೧೧. ಚಂದ್ರಶೇಖರ ನಂಗಲಿ, ಕಾಡು ಮತ್ತು ತೋಪು, ಪು. ೯೯
೧೨. ಜಿ.ಎಸ್.ಶಿವರುದ್ರಪ್ಪನವರ ಸೌಂದರ್ಯ ಸಮೀಕ್ಷೆ, ಪು. ೨೭
೧೩. ಕುವೆಂಪು, ಪಾಂಚಜನ್ಯ, ಪು. ೨೬
೧೪. ಕುವೆಂಪು, ಕಥನ ಕವನಗಳು, ಪು. ೨೦
೧೫. ಕುವೆಂಪು, ಮೋಡಣ್ಣನ ತಮ್ಮ, ಪು. ೮–೯
೧೬. ಚಂದ್ರಶೇಖರ ನಂಗಲಿ, ಕಾಡು ಮತ್ತು ತೋಪು, ಪು. ೧೧
೧೭. ಬಿ.ಜಿ.ಎಲ್.ಸ್ವಾಮಿ, ಹಸುರುಹೊನ್ನು, ಪು. ೨೦–೨೧
೧೮. ಕೆ.ಪಿ. ಪೂಣಚಂದ್ರ ತೇಜಸ್ವಿ, ಪರಿಸರದ ಕತೆ, ಪು. ೨೮–೩೦
೧೯. ನಾಗೇಶ್ ಹೆಗಡೆ, ಇರುವುದೊಂದೆ ಭೂಮಿ, ಪು. ೧೨೩
೨೦. ಟಿ.ಎಸ್.ವಿವೇಕಾನಂದ, ಭೂಮಿಗೀತೆ, ಪು. ೧೫೪–೧೫೫
೨೧. ಅದೇ., ಪು. ೧೬೮–೧೬೯
೨೨. ಚಂದ್ರಶೇಖರ ನಂಗಲಿ, ಕಾಡು ಮತ್ತು ತೋಪು, ಪು. ೫೦–೫೨
೨೩. ಟಿ.ಎಸ್.ವಿವೇಕಾನಂದ, ಭೂಮಿಗೀತೆ, ಪು. ೧೪೮–೧೪೯
೨೪. ಚಂದ್ರಶೇಖರ ನಂಗಲಿ, ಕಾಡು ಮತ್ತು ತೋಪು, ಪು. ೮೮–೮೯
೨೫. ನಾಗೇಶ್ ಹೆಗಡೆ, ಇರುವುದೊಂದೆ ಭೂಮಿ, ಪು. ೧೫೨–೧೫೩
೨೬. ಟಿ.ಎಸ್.ವಿವೇಕಾನಂದ, ಭೂಮಿಗೀತೆ, ಪು. ೨೩೪–೨೩೫

*****

# ಅಧ್ಯಾಯ - ೫

# ಪರಿಸರ ಕಥನಗಳಲ್ಲಿನ ತಾತ್ತ್ವಿಕತೆಯ ತೌಲನಿಕ ನೋಟ

“ಇದು ಇಪ್ಪತ್ತೊಂದನೆಯ ಹೊಸ ಶತಮಾನ. ತನ್ನ ದಿನಚರಿಯ ಹೊಸ ಪುಟಗಳನ್ನು ತೆರೆಯುತ್ತಿರುವ ಹೊತ್ತಿಗೆ ನಾವು ಸಾಕ್ಷಿಯಾಗುತ್ತಿದ್ದೇವೆ. ಭಾರತಕ್ಕೆ ಬ್ರಿಟಿಷರ ಆಗಮನವಾದ ಕಾಲದಂತೆ ಇದೂ ಒಂದು ಸಾಹಿತ್ಯದ ಒಂದು ಮಹಾತಿರುವಿನ ಕಾಲವಾಗಿದೆ. ಹೇಳಿಕೇಳಿ ಇದು ಜಾಗತೀಕರಣದ ಯುಗ. ಅದನ್ನು ಬಹು ಆಯಾಮಗಳಲ್ಲಿ ಕಾಣಬಹುದು. ತಂತ್ರಜ್ಞಾನ ಮಾಹಿತಿ ವಿಜ್ಞಾನ ಮತ್ತು ಬಗೆ ಬಗೆಯ ಸಮೂಹ ಮಾಧ್ಯಮಗಳ ಸಹಾಯದಿಂದ ಸಾಹಿತ್ಯ ಮತ್ತು ತಂತ್ರಜ್ಞಾನ ಎಷ್ಟೇ ದೂರವನ್ನಾಗಲೀ ಬರಸೆಳೆದು ಹತ್ತಿರಕ್ಕೆ ತಂದುಕೊಳ್ಳ-ಬಹುದಾಗಿದೆ. ಅದನ್ನು ತಂತ್ರಜ್ಞಾನದ ಮೂಲಕ ಸುಲಭವಾಗಿ ಕ್ರಮಿಸಬಹುದಾಗಿದೆ.”[೧] ಎಲ್ಲ ಮಾಹಿತಿಗಳು ಕುಳಿತಲ್ಲೇ ಲಭ್ಯವಾಗುತ್ತಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಕ್ಷಣಾರ್ಧದಲ್ಲಿ ದೊರೆಯುವ ಮಾಹಿತಿ ನಿಜವಾಗಿಯೂ ದೈಹಿಕವಾಗಿದೆಯಾ, ಮಾನಸಿಕವಾಗಿದೆಯಾ, ಸಾಮಾಜಿಕವಾಗಿದೆಯಾ, ರಾಜಕೀಯವಾಗಿದೆಯಾ ಅಥವಾ ಕೇವಲ ಯಾಂತ್ರಿಕವಾಗಿದೆಯಾ, ಕಾದು ನೋಡಬೇಕಾಗಿದೆ. ಭಾರತಕ್ಕೆ ಯುರೋಪಿನರ ಆಗಮನವು ಇಂಥದೇ ಮಹತ್ವದ ತಿರುವನ್ನು ತಂದುಕೊಟ್ಟ ಕಾಲವಾಗಿತ್ತು.

ಈ ಹಿನ್ನಲೆಯಲ್ಲಿ ಭಾರತೀಯರ ಬದುಕನ್ನು ಹೊಸ ಜೀವನ ಕ್ರಮಕ್ಕೆ ಅನಿವಾರ್ಯವಾಗಿ ಹೀಗೆ ಒಗ್ಗಿಸಿಕೊಂಡು ಆ ಕಾಲ ಸಂದರ್ಭವನ್ನು ಈಗ ಇನ್ನೊಮ್ಮೆ ಗಮನಿಸಿದರೆ ಕೆಲವು ವಿಶಿಷ್ಟ ಅನುಭವಗಳು ನಮಗೆ ದಕ್ಕಬಹುದು. ಸದ್ಯದ ಅರಿವನ್ನು ಮೀರುವಂತೆ ಬೆಳೆಯುತ್ತಿರುವ ಇಂದಿನ ಬಹುರೂಪಿ ವಿದ್ಯಮಾನಗಳ ಸಂಕೀರ್ಣತೆಯನ್ನು ಸರಿಯಾಗಿ ನೋಡಲು ಹೊಸ ಚೈತನ್ಯ ಸಿಕ್ಕಬಹುದು.

ಈ ಬಗೆಯ ಹಿನ್ನೋಟಕ್ಕೆ ಕೇವಲ ಒಂದು ನೆಪವಾಗಿಯಾದರೂ ಸಹಾಯಕ್ಕೆ ಬರುವುದು ತೌಲನಿಕ ಅಧ್ಯಯನ. ತುಲನೆ ಮತ್ತು ವಿಶ್ಲೇಷಣೆಯು ಸಂಸ್ಕೃತಿಯ ಸಂಕ್ರಮಣವನ್ನು ತಿಳಿಯಲು ಸಂಶೋಧಕರಿಗೆ ಅತ್ಯಗತ್ಯವಾದ ಉಪಕರಣಗಳು ಎಂಬುದಾಗಿ ಟಿ.ಎಸ್.ಎಲಿಯಟ್ ಬಹಳ ಹಿಂದೆಯೇ ಹೇಳಿದ್ದಾನೆ. ಅವುಗಳನ್ನು ವಿಮರ್ಶಕರಾದವರು ಸರಿಯಾದ ರೀತಿಯಲ್ಲಿ ಬಳಸಬೇಕು ಎಂಬುದನ್ನು ಆತ ಮರೆಯದೆ ತಿಳಿಸಿದ್ದಾನೆ. ಜಗತ್ತಿನ ವೈವಿಧ್ಯಮಯವಾದ ಭಾಷೆಗಳನ್ನು ಜೀವನ ಸಂಸ್ಕೃತಿಗಳನ್ನು ನಡೆ-ನುಡಿ, ಆಚಾರ-ವಿಚಾರಗಳನ್ನು ಅನುಭವ ವಿಶೇಷಗಳನ್ನು ವಿಶಾಲ ದೃಷ್ಟಿಯಿಂದ ತಿಳಿದುಕೊಳ್ಳಲು ತೌಲನಿಕ ಅಧ್ಯಯನವು ಪ್ರೇರೇಪಿಸುತ್ತದೆ. ಅದಕ್ಕೆ ‘ವಿಶ್ವಸಾಹಿತ್ಯ’ ಅಥವಾ ‘Universal literature’[೨] ಎಂಬ ಇನ್ನೊಂದು ಹೆಸರಿನಿಂದ ಕರೆಯಲಾಗುತ್ತದೆ.

ಯಾವುದೇ ಕಾಲಘಟ್ಟದ ಸಂಸ್ಕೃತಿಯ ಪುನರ್ ನಿರ್ಮಾಣಕ್ಕೆ ಈ ತೌಲನಿಕ ಅಧ್ಯಯನ ಕ್ರಮವು ಸುಲಭಸಾಧ್ಯವಾದ ಪ್ರವೇಶ ದ್ವಾರವಾಗಿದ್ದು, ಆ ಕಾರಣದಿಂದಲೇ ಇತ್ತೀಚೆಗೆ ಅದು ಬಹು ಪ್ರಸಿದ್ಧಿಯನ್ನು ಪಡೆದುಕೊಳ್ಳುತ್ತದೆ.

**ತೌಲನಿಕ ಅಧ್ಯಯನದ ಅವಶ್ಯಕತೆ**

ತೌಲನಿಕ ಅಧ್ಯಯನವೆಂದರೆ ತುಲನೆ ಮಾಡುವುದು ಇಲ್ಲವೇ ಹೋಲಿಸಿ ನೋಡುವುದು ಎಂದರ್ಥ. ಹಲವು ವೈವಿಧ್ಯಮಯ ಸಂಗತಿಗಳನ್ನು ಪರಸ್ಪರ ಎದುರು ಬದುರು ಇರಿಸಿ ಅವುಗಳ ಜೀವಸಂಕುಲಗಳನ್ನು ಸೃಷ್ಟಿಸುವುದು. ಈ ಭೂಮಿಯ ಒಡೆತನ ಕೇವಲ ಮಾನವನದಲ್ಲ ಸಕಲ ಜೀವಿಗಳ ಸ್ವತ್ತು. ಈ ಮೂಲಕ ಲೋಕದೃಷ್ಟಿಯನ್ನೂ ಗ್ರಹಿಸುವುದು ಮುಂದುವರೆದು ಈ ಜೀವ ಜಗತ್ತಿನ ಶಕ್ತಿ–ಸಾಧ್ಯತೆ, ಮಿತಿ–ದೌರ್ಬಲಯಗಳನ್ನು ಸೂಕ್ಷ್ಮವಾಗಿ ಅರಿಯುವುದು. ಆ ಮೂಲಕ ಮುಖ್ಯವಾಗಿ ಅದು ಪ್ರತಿಪಾದಿಸುತ್ತಿರುವ ಸಮಾಜಮುಖಿ ಮೌಲ್ಯಗಳನ್ನು ಎತ್ತಿ ಹಿಡಿಯುವುದು ತೌಲನಿಕ ಅಧ್ಯಯನದ ಪ್ರಧಾನ ಉದ್ದೇಶ.

**ತೌಲನಿಕ ಅಧ್ಯಯನದ ಅವಶ್ಯಕತೆಯನ್ನು ಸ್ಥೂಲವಾಗಿ ಹೀಗೆ ಪಟ್ಟಿ ಮಾಡಿ ಗುರುತಿಸಬಹುದು.**

೧. ಜಗತ್ತಿನ ವೈವಿಧ್ಯಮಯವಾದ ಜನಜೀವನಶೈಲಿ ಹಾಗೂ ಅವರ ಅನುಭವ ವಿಶೇಷಗಳನ್ನು ವಿಶಾಲ ದೃಷ್ಟಿಕೋನದ ಮೂಲಕ ಕಂಡುಕೊಳ್ಳುವುದು.

೨. ಪರಿಸರ ಸಮಸ್ಯೆಯ ಮೂಲವನ್ನು ಜಾಗತಿಕ ಹಿನ್ನೆಲೆಯಲ್ಲಿಟ್ಟು ಗ್ರಹಿಸುವುದು.

೩. ಆಧುನಿಕ ತಂತ್ರಜ್ಞಾನಗಳ ಪ್ರವೇಶದಿಂದ ಸ್ಥಳೀಯ ಜನ ಜೀವನದ ಮೇಲಾಗುವ ರೂಪಾಂತರ–ಪಲ್ಲಟವನ್ನು ಅರಿಯುವುದು.

೪. ಮಾನವನು ಪರಿಸರದ ಮೇಲೆ ನಿರಂತರವಾಗಿ ನಡೆಸುತ್ತಿರುವ ದೌರ್ಜನ್ಯವನ್ನು ವಿವಿಧ ಆಯಾಮಗಳಲ್ಲಿ ಅರಿಯಲು.

೫. ಪರಿಸರ ಸಮಸ್ಯೆಯ ಪ್ರಭಾವದಿಂದ ಸ್ಥಳೀಯವಾಗಿ ಮತ್ತು ಅಂತರಾಷ್ಟ್ರೀಯವಾಗಿ ಉಂಟಾಗುವ ರೂಪಾಂತರಗಳು. ಪಲ್ಲಟಗಳು, ಪರಿವರ್ತಿತ ಚಹರೆಗಳು ಈ ಎಲ್ಲಾ ಬದಲಾವಣೆಗಳ ಬಗ್ಗೆ ಇಲ್ಲಿನ ಚಿಂತಕರು ಲೇಖಕರು ಕಂಡರಸಿರುವ ಅವರ ಅನುಭವಗಳನ್ನು ಅಭಿವ್ಯಕ್ತಿಸಿರುವ ಲೋಕದೃಷ್ಟಿಯನ್ನು ಪರಿಶೀಲಿಸುವುದು.

ಪರಿಸರ ಸಂರಕ್ಷಣೆಯಿಂದಾಗುವ ಅನುಕೂಲಗಳು ಹಾಗೂ ಪರಿಸರ ನಾಶದಿಂದಾಗುವ ಉದ್ಭವಿಸುವ ಸಮಸ್ಯೆ ಮತ್ತು ಪರಿಸರ ಸುರಕ್ಷತೆಗಾಗಿ ಯಾವ ರೀತಿಗಳಲ್ಲಿ ನೆರವಿಗೆ ಬರಬಹುದೆಂದು ಆಶಯವನ್ನು ಹುಡುಕುವುದು, ಸ್ಥೂಲವಾಗಿ ಇವಿಷ್ಟನ್ನು ತೌಲನಿಕ ಅಧ್ಯಯನದ ಮುಖ್ಯ ಉದ್ದೇಶಗಳೆನ್ನಬಹುದು.

ಇಂತಹ ಹಲವು ಉದ್ದೇಶಗಳನ್ನು ಇಟ್ಟುಕೊಂಡು ಕುವೆಂಪು ಬಿ.ಜಿ.ಎಲ್.ಸ್ವಾಮಿ, ಕೆ.ಪಿ, ಪೂರ್ಣಚಂದ್ರ ತೇಜಸ್ವಿ, ನಾಗೇಶ್ ಹೆಗಡೆ, ಚಂದ್ರಶೇಖರ ನಂಗಲಿ, ಟಿ.ಎಸ್. ವಿವೇಕಾನಂದ ರವರ ಆಧುನಿಕ ಕನ್ನಡದ ಪ್ರಾತಿನಿಧಿಕ ಪರಿಸರ ಕಥನಗಳ ತೌಲನಿಕ ಸಮೀಕ್ಷೆಯನ್ನು ನಡೆಸಲು ಇನ್ನು ಮುಂದೆ ಇಲ್ಲಿ ಪ್ರಯತ್ನಿಸಲಾಗುತ್ತದೆ.

ಇವರು ತಮ್ಮ ಪರಿಸರ ಕಥನ ಸಾಹಿತ್ಯದಲ್ಲಿ ವಿವರವಾಗಿ ವಿಶ್ಲೇಷಿಸಿರುವುದನ್ನು ಒಟ್ಟಿಗೆ ಇಟ್ಟು ಪರಿಶೀಲಿಸುವುದು ಪ್ರಸ್ತುತ ಅಧ್ಯಾಯದ ಉದ್ದೇಶ. ಅವರು ಪರಿಸರ ಸಂರಕ್ಷಣೆಯ ಬಗ್ಗೆ ಜಾಗೃತಿ ಮೂಡಿಸಿರುವ ಕಥಾ ಸಾಹಿತ್ಯವನ್ನು ವಿವಿಧ ಮಗ್ಗುಲುಗಳನ್ನು ಪರಸ್ಪರ ಹೋಲಿಸಿ ವಿಶದೀಕರಿಸಲು ಈ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ. ಇವರು ರಚಿಸಿರುವ ಪರಿಸರ ಕಥಸಾಹಿತ್ಯದಲ್ಲಿ ಇವರ ಕಾಲಘಟ್ಟದಲ್ಲಿ ವ್ಯತ್ಯಾಸವಿದ್ದರೂ ಇವರೆಲ್ಲರೂ ಪರಿಸರ ಸಂರಕ್ಷಣೆ ನೀಡಿರುವ ಒತ್ತನ್ನು ಕುರಿತು ಚರ್ಚಿಸುವುದು. ಹಾಗೂ ಮಾನವನಿಂದ ಪರಿಸರದ ಮೇಲೆ ನಡೆಯುತ್ತಿರುವ ನಿರಂತರ ಅತ್ಯಾಚಾರ ಅಳಿವಿನಂಚಿನಲ್ಲಿರುವ ಹಲವು ಜೀವ ಸಂಕುಲಗಳನ್ನು ಅರಿಯುವುದು. ಅವುಗಳ ರಕ್ಷಣೆಗಾಗಿ ಪಣ ತೊಡುವುದು. ಈ ಮೂಲಕ ಹಲವು ಲೇಖಕರು ಪರಿಸರ ಸಂರಕ್ಷಣೆಯ ಬಗ್ಗೆ ಸಾಹಿತ್ಯ ಧೋರಣೆಯಲ್ಲಿ ವ್ಯಕ್ತವಾಗುವ ಸಾಮ್ಯತೆ, ಭಿನ್ನತೆ, ವೈರುಧ್ಯ ಮತ್ತು ಅನನ್ಯತೆಗಳನ್ನು ಶೋಧಿಸುವುದು ಈ ಅಧ್ಯಾಯದ ಉದ್ದೇಶವಾಗಿದೆ.[೨]

ಒಟ್ಟು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಆಧುನಿಕ ಕಾಲಘಟ್ಟವನ್ನು ಒಂದು ತೌಲನಿಕ ಅಭ್ಯಾಸಗಳಿಗೆ ಸ್ಫೂರ್ತಿಯ ಯುಗವೆಂದು ಕರೆಯಬಹುದು. ಆಧುನಿಕ ಲೇಖಕರೆಲ್ಲರು ತಮ್ಮ ಸೃಜನಶೀಲತೆಯಿಂದ ಪ್ರೇರಣೆಗಾಗಿ ಒದಗಿಬಂದ ಮೂಲ ಪುರುಷರು. ಸಾಂಪ್ರದಾಯಕವಾದ ಇಲ್ಲವೆ ಅತ್ಯಾಧುನಿಕ ತಂತ್ರಜ್ಞಾನದ ದಬ್ಬಾಳಿಕೆಗಳ ಎದುರು ತಾತ್ವಿಕ ಅಸ್ತ್ರಗಳನ್ನು ಕಟ್ಟಿ ಬಳಸುವಾಗ ಅಥವಾ ತಮ್ಮ ತಮ್ಮ ಅನಿಸಿಕೆ – ಅಭಿವ್ಯಕ್ತಿಗಳಿಗೆ ಹೊಸ ಹೊಸ ಸಾಹಿತ್ಯದ ಆಯಾಮಗಳನ್ನು ಸೃಷ್ಟಿಸುವುದು ಇದರ ಸೃಜನ ಶೀಲತೆಯನ್ನು ಎತ್ತಿ ತೋರಿಸುತ್ತದೆ. ಇವರ ಕಥಾಸಾಹಿತ್ಯದಲ್ಲಿ ಜನರಲ್ಲಿ ಜಾಗೃತಿ ಮೂಡಿಸಲು ಒಂದು ಹೊಸ ಮಿಂಚನ್ನೇ ಹರಿಸಿದ್ದಾರೆ.

### ಸಮೀಕ್ಷೆಯ ತಾತ್ವಿಕತೆಯ ತೌಲನಿಕ ನೋಟ

ಭಾರತದಂತಹ ಭರತಖಂಡ ದೇಶದಲ್ಲಿ ಲೇಖಕರಾದವರ ಸ್ಥಾನಮಾನ ಮತ್ತು ಅವರ ಜವಾಬ್ದಾರಿಗಳ ಕುರಿತಂತೆ ಚಿಂತಕ ಪಿ.ಲಂಕೇಶ ಅವರು ಹೇಳುವ ಕೆಲವು ಮಾತುಗಳು ಹೀಗಿವೆ: "ಒಬ್ಬ ಲೇಖಕನಿಗೆ ದಂತಗೋಪುರಗಳು ಬಹಳ ರೀತಿಯಲ್ಲಿರುತ್ತವೆ. ಅದು ಶಾರೀರಿಕ ಅಹಂಕಾರದ ರೀತಿಯಲ್ಲಿ ರಾಜಕೀಯ ಹೋರಾಟದ ರೂಪದಲ್ಲಿ, ದೇಶಪ್ರೇಮದ ರೂಪದಲ್ಲಿ, ಜಾತಿಪ್ರೇಮದ ರೂಪದಲ್ಲಿ, ಉನ್ನತ ಮೇಧಾವಿಯ ರೂಪದಲ್ಲಿ ಪರಿಸರದ ಬಗ್ಗೆ

ಇರುವ ಕಾಳಜಿಯ ರೂಪದಲ್ಲಿ ಇರಬಹುದು. ಅಥವಾ ಅವನ ಆತ್ಮವನ್ನು ಆಕ್ರಮಿಸಿದ ಯಾವುದೇ ತತ್ತ್ವದ ರೂಪದಲ್ಲಿರಬಹುದು. ಇದರಿಂದಾಗಿ ಲೇಖಕನಾದವನು ಹಲವು ವಿಭಿನ್ನ ರೀತಿಯಲ್ಲಿ ತನ್ನ ಒಳದೃಷ್ಟಿಕೋನವನ್ನು ಕಾಪಾಡಿಕೊಳ್ಳಬೇಕಾಗುತ್ತದೆ."[೩]

ಪರಿಸರ ಕುರಿತು ಹಲವು ಲೇಖಕರು ತಮ್ಮ ವಿಶಿಷ್ಟ ಸಂವೇದನಾಶಕ್ತಿಯಿಂದ ತಮ್ಮ ಕಾಲದ ಅನುಭವದ ಸಮಾಜದ ವಾಸ್ತವ ಚಿತ್ರಗಳನ್ನು ಶಕ್ತಿಮೀರಿ ಹಿಡಿದಿಡಲು ಪ್ರಯತ್ನಿಸಿದ ಕನ್ನಡದ ಪ್ರಮುಖ ಲೇಖಕರಲ್ಲಿ ಕುವೆಂಪು ಮೊದಲ ಸ್ಥಾನದಲ್ಲಿ ನಿಲ್ಲುತ್ತಾರೆ. ಪರಿಸರ ಕಥನಗಾರರು ಮನುಷ್ಯ ತನ್ನೆಲ್ಲ ಸಂಕೀರ್ಣತೆಯೊಂದಿಗೆ ಈ ಭೂಮಿಯ ಮೇಲೆ ಪರಿಸರದೊಂದಿಗೆ ಅವನು ವರ್ತಿಸುವ ರೀತಿ ತನ್ನ ಸ್ವಾರ್ಥಕ್ಕಾಗಿ ಪರಿಸರವನ್ನು ಯಾವ ರೀತಿ ಬಲಿಕೊಡುತ್ತಿದ್ದಾನೆ ಎಂಬುದನ್ನು ಶೋಧಿಸಿ ಎಳೆ ಎಳೆಯಾಗಿ ತೆರೆದಿಟ್ಟಿದ್ದಾರೆ. ಲೇಖಕರಾದವರು ಹಲವು ಕಟ್ಟುಪಾಡುಗಳಿಗೆ ಒಳಗಾಗದೆ ಯಾವುದಕ್ಕೂ ಸೀಮಿತವಾಗಿರದೆ ಅದರಿಂದ ಹೊರಬಂದು ವಾಸ್ತವವನ್ನು ಅವರ ಆತ್ಮ ಸಾಕ್ಷಿಯಾಗಿ ಒಪ್ಪುವಂತೆ ಮಾನವೀಯ ನೆಲೆಯಲ್ಲಿ ಕಾಪಾಡಿಕೊಂಡ ಪರಿಣಾಮದಿಂದ ಪರಿಸರ ಕಥನಗಳು ಸಾಧ್ಯವಾಯಿತು ಎಂದು ಹೇಳಬಹುದು.

ಹೀಗೆ ಪ್ರಪಂಚದಲ್ಲಿ ಹಲವು ಬಗೆಯ ಚಿಂತನೆಧಾರೆಗಳಿಂದ ಪ್ರೇರಣೆಗಳನ್ನು ಪಡೆದ ಹಲವು ಪರಿಸರ ಕಥನಕಾರರು ಕನ್ನಡ ಸಾಹಿತ್ಯದಲ್ಲಿ ಒಂದು ಮಹತ್ವಾಕಾಂಕ್ಷೆಯ ಅಭಿವ್ಯಕ್ತಿಗಳನ್ನು ವ್ಯಕ್ತಿಪಡಿಸಿದ್ದಾರೆ. ಅವರು ರೂಪಿಸಿದ ಕಥನ ಸಾಹಿತ್ಯವನ್ನು ಪರಿಸರ ಸಂರಕ್ಷಣೆಯ ದೃಷಟಿಯಿಂದ ಅಥವಾ ಪ್ರಕೃತಿಯ ಆರಾಧನೆಯು ಗುಣಕ್ಕಾಗಿ ಪರಸ್ಪರ ಮುಖಾಮುಖಿಯಾಗಿಸಿ ಹೋಲಿಸಿ ನೋಡಿದರೆ ವೈವಿಧ್ಯಮಯವಾದ ವಿಚಾರಗಳು ಹೊರಹೊಮ್ಮುತ್ತವೆ. ಅವುಗಳಲ್ಲಿ ಹಲವು ಬಗೆಯ ಹೋಲಿಕೆಗಳು, ಭಿನ್ನಾಬಿಪ್ರಾಯಗಳು ಹೀಗೆ ಅವರಲ್ಲಿದ್ದ ವಿಭಿನ್ನ ಚಿಂತನೆಗಳು ಗೋಚರವಾಗುತ್ತವೆ.

ಕುವೆಂಪು ಅವರಿಂದ ಹಿಡಿದು ಇಂದಿನ ಪರಿಸರ ಕಥನಗಾರರ ಚಿಂತನೆಗಳನ್ನು ಗಮನಿಸುವುದಾದರೆ ಮಾನವನ ನಡವಳಿಕೆಯಿಂದ ಬೇಸತ್ತು ಈ ಜಗತ್ತಿ ಜನಿಸಿರುವುದೇ ಕೇವಲ ಮಾನವನಿಗಾಗಿ ಮತ್ರ ಎಂಬ ಅವನ ದುರಾಡಳಿತ, ಅವನ ಸ್ವಾರ್ಥಕ್ಕಾಗಿ ಪರಿಸರವನ್ನು ಹಂತ ಹಂತವಾಗಿ ಬಲಿಕೊಡುತ್ತಿರುವುದನ್ನು ಪರಿಸರ ಕಥನಗಾರರು ಹಲವು ಸಾಕ್ಷಿ ಸಮೇತ ಅದರ ಬರವಣಿಗೆಯ ಮೂಲಕ ಮಾನವನಲ್ಲಿ ಜಾಗೃತಿ ಮೂಡಿಸುವುದ ಜೊತೆಗೆ ಎಚ್ಚರಿಕೆಯ ಗಂಟೆಯನ್ನು ನೀಡಿದ್ದಾರೆ.

**ಪರಿಸರ ಕಥನದಲ್ಲಿ ಆಧ್ಯಾತ್ಮಿಕತೆ**

ಲೌಕಿಕ ಮತ್ತು ಪಾರಮಾರ್ಥಿಕ ಎಂಬ ಎರಡು ಶಾಖೆಗಳನ್ನು ಪ್ರಾಜ್ಞರು ಗುರುತಿಸುತ್ತಲೇ ಬಂದಿದ್ದಾರೆ. ಲೌಕಿಕದಿಂದ ಬಿಡುಗಡೆ ಹೊಂದಿ ಆಧ್ಯಾತ್ಮದಲ್ಲಿಯೂ ಬದುಕಿನ ಅರ್ಥ

ಕಂಡುಕೊಳ್ಳುವ ಪ್ರಯತ್ನಗಳು ನಡೆದಿವೆ. ಲೌಕಿಕವನ್ನು ಆಧ್ಯಾತ್ಮಿಕ ಸಾಧನೆಯ ಮೂಲಕ ಪರಿವರ್ತಿಸುವ ಪ್ರಯತ್ನಗಳೂ ನಡೆದಿಲ್ಲ ಹನ್ನೆರಡನೆಯ ಶತಮಾನದ ಬಸವಣ್ಣ ಲೌಕಿಕದಲ್ಲಿ ಗಟ್ಟಿಯಾಗಿ ನೆಲೆಯೂರಿಯೇ ಆಧ್ಯಾತ್ಮಿಕ ಜೀವನಕ್ಕೆ ಹೊಸ ಆಯಾಮ ತಂದು ಕೊಟ್ಟಿದ್ದಾರೆ. ಇಪ್ಪತ್ತನೆಯ ಶತಮಾನದಲ್ಲಿ ಶ್ರೀ ರಾಮಕೃಷ್ಣ ಪರಮಹಂಸರು ಲೌಕಿಕ ಆಧ್ಯಾತ್ಮಿಕಗಳೆರಡರಲ್ಲಿ ಸಮನ್ವಯ ಸಾಧಿಸುವ ಮಹತ್ಸಾಧನೆ ಮಾಡಿದರು. ಇದೇ ಸಮಯದಲ್ಲಿ ಶ್ರೀ ಅರವಿಂದರು "ಜೀವನವೆಲ್ಲವೂ ಯೋಗವೇ" ಎಂದು ಪೂರ್ಣಯೋಗದ ಹೊಸ ಸಿದ್ಧಾಂತವನ್ನು ಪ್ರತಿಪಾದಿಸಿದರು.

ಪ್ರಕೃತಿಗೂ ಮತ್ತು ಆಧ್ಯಾತ್ಮಕ್ಕೂ ಅವಿನಾಭಾವ ಸಂಬಂಧವಿರುವುದನ್ನು ಉಪನಿಷತ್ತಿನಲ್ಲಿ ಬರುವ ಋಷಿಯ ವಾಣಿಗಳಿಂದ ಗುರುತಿಸಿಕೊಳ್ಳಬಹುದು. ಈ ಆಧ್ಯಾತ್ಮಕ್ಕೆ ಸಂಬಂಧಿಸಿದ "ದರ್ಶನ'ವೆಂಬುದಕ್ಕೆ ಹೀಗೆ ನೋಡಬಹುದು. ಈ ದರ್ಶನವೆಂಬುದು ಋಷಿಗಳಿಗೆ ಅವಿರ್ಭವಿಸಿದ್ದು ಅರಣ್ಯಗಳ ಮಧ್ಯದಲ್ಲಿರುವ ತಪೋವನದಲ್ಲಿ ಹಸಿರು, ಪ್ರಕೃತಿಯ ಪ್ರಶಾಂತ ಸನ್ನಿವೇಶಗಳಲ್ಲಿ ಋಷಿಯ ಭಾವನೆಯೂ ಆ ತಪೋವನದ ಸನ್ನಿವೇಶದಿಂದ ಹೊಂದಿಕೊಂಡೂ ಹೊರ ಹೊಮ್ಮಿರುತ್ತದೆ.

**ಕುವೆಂಪು:** ಪ್ರಕೃತಿಯ ವಿಷಯದಲ್ಲಿ ಕವಿಯ ದೃಷ್ಟಿ ಪೂರ್ಣ ದೃಷ್ಟಿಯಾಗಿ ಬೆಳೆಯಬೇಕಾದರೆ ಅದು ದರ್ಶನದ ಹಂತಕ್ಕೆ ಏರಬೇಕಾಗುತ್ತದೆ. ಇದಕ್ಕೆ ಬಹಳ ಕಾಲದ ಜೊತೆಗೆ ಸಾಧನೆಯೂ ಬೇಕಾಗುತ್ತದೆ. ಅರಿತೋ ಅರಿಯದೆಯೋ ಈ ಸಾಧನೆ ತಪಸ್ಸಿನ ರೂಪ ಪಡೆದುಕೊಳ್ಳುತ್ತದೆ. ಈ ಸಹಜ ಯೋಗ ಸಾಧನೆಯಿಂದಲೇ ಕವಿ ದೃಷ್ಟನಾದವನು ರಸಋಷಿಯಾಗಿ ಪೂರ್ಣದೃಷ್ಟಿಯಿಂದ ದರ್ಶನದ ಹಂತಕ್ಕೆ ಏರುತ್ತಾನೆ. ಆದರೆ ಸೃಷ್ಟಿಯ ಜಡವಸ್ತುಗಳ ಜೊತೆಯಲ್ಲಿ ಬೆರೆತ ಮನಸ್ಸು ಸೃಷ್ಟಿಯ ಸರ್ವ ವ್ಯಾಪಾರಗಳ ಸ್ವಚ್ಛ ಪ್ರಕಾಶನ ಭಿನ್ನ ಭಿನ್ನ ಪ್ರಕಾರಗಳು ಬೆರೆತು ಪೂರ್ಣ ದೃಷ್ಟಿಯ ಸಾಕ್ಷತ್ಕಾರ ಪ್ರಜ್ಞೆ ಇನ್ನೂ ಜ್ಞಾನವಿಲ್ಲದ ಮಗುವಿನಲ್ಲಿ ಸಹಜವಾಗಿರುವಂತೆ ತೋರಿದ್ದು ನಂತರದಲ್ಲಿ ಗಂಭೀರದತ್ತ ಸಾಗುತ್ತದೆ. ಹೀಗೆ ರೂಪುಗೊಂಡ ಕವಿಪ್ರಜ್ಞೆಗೆ ಮೊದಲು ಆಕರ್ಷಿತವಾಗುವುದು ವೈವಿಧ್ಯಪೂರ್ಣವಾದ ಪ್ರಕೃತಿಯ ಸೌಂದರ್ಯ. ಸೌಂದರ್ಯದ ವರ್ಣಮಯ ಚೇತನ ಕವಿ ಪ್ರಜ್ಞೆಯನ್ನು ಸೆಳೆಯುತ್ತದೆ. ಈ ರಸಾಕರ್ಷಣೆಗೆ ಸಿಲುಕಿದ ಕವಿ ಅನಿವಾರ್ಯವೆಂಬಂತೆ ಸೌಂದರ್ಯದ ಆಸ್ವಾದನೆಯಲ್ಲಿ ತೇಲಿ ತಾವರೆಯ ತೇರನ್ನು ಏರುತ್ತಾನೆ.

ಕುವೆಂಪು ಸಾಹಿತ್ಯ ರಚನೆಯ ಹಿನ್ನಲೆಯಲ್ಲಿಯೇ ಆಧ್ಯಾತ್ಮಿಕ ಚಿಂತನೆ ಮೂಡುತ್ತಿರುವಂತೆ ಕಂಡುಬರುತ್ತದೆ. ಪ್ರಕೃತಿಯ ಬಹಿರಂಗದ ಸೌಂದರ್ಯವನ್ನು ಕಂಡು ತನ್ಮಯತೆಯಿಂದ ಬಣ್ಣಿಸಲು ಪ್ರಾರಂಭಿಸಿದ ಕವಿ ಅದರ ಅಂತರಂಗದ ಆತ್ಮ ತೇಜಸ್ಸಿಗೂ

ಗಮನಕೊಡುತ್ತಿರುವುದು ಮಹತ್ವದ ಸಂಗತಿಯಾಗಿ ಕಾಣುತ್ತದೆ. ಕಲಾಸುಂದರಿ ಸಂಗ್ರಹಕ್ಕೆ 'ಮುನ್ನುಡಿ' ಬರೆಯುತ್ತಾ ಕುವೆಂಪು, "ಕಲಾಸುಂದರಿ ಸರಸಿಯಾದರೂ ಮಹಾತಪಸ್ವಿನಿ. ಆಕೆಯ ಬಹಿರಂಗದಲ್ಲಿ ತೇಜಸಿರುವಂತೆ ಅಂತರಂಗದಲ್ಲಿ ತಪಸ್ಸಿಗೆ..... ಆಕೆ ಎಷ್ಟರಮಟ್ಟಿಗೆ ಭೋಗಿನಿಯೋ ಅದಕ್ಕಿಂತಲೂ ಹೆಚ್ಚಾಗಿ ಯೋಗಿನಿ, ಆಕೆ ಲಘು ಮಾನಸರ ಆಲಸ ಸಮಯದ ನರಮೂರ್ತಿಯಲ್ಲ. ಕಲೋಪಾಸಕರ ಹೃದಯ ಕುಟೀರದ ತಪೋಮೂರ್ತಿ ಆಕೆಯಲ್ಲಿ ಕಾವ್ಯದ ರಮಣೀಯತೆಯೂ ತತ್ತ್ವದ ಸೂಕ್ಷ್ಮತೆಯೂ ಒಂದಾಗಿದೆ".[೪]

ಇಲ್ಲಿ ಕವಿ ಆತ್ಮ ಬೋಧನೆಯ ಜೊತೆಗೆ ಜನಬೋಧನೆಯನ್ನು ಮಾಡುತ್ತಾರೆ. ಇದು ಕವಿಯ ಜೀವನದಲ್ಲಿ ಒಂದು ರಸನಿಮಿಷವಾಗಿ ಜೀವನದಲ್ಲಿ ಅತ್ಯಮೂಲ್ಯವಾಗುತ್ತದೆ. 'ಪ್ರಕೃತಿಯರಾಧನೆಯೇ ಪರಮನಾರಾಧನೆ' ಎಂಬ ಸಾಕ್ಷಾತ್ಕಾರದ ಕಡೆಗೆ ಕವಿ ಇಲ್ಲಿಂದ ನೇರವಾಗಿ ಧಾವಿಸುತ್ತಿರುವುದನ್ನು ಕಾಣಬಹುದು. ಆ ಚಿನ್ಮಯ ಶಕ್ತಿಯ ದಯಾಪೂರ್ಣವಾದ ಲೀಲವಿಲಾಸಗಳ ಪ್ರಭಾವಗಳಿಗೆ ನಮ್ಮನ್ನು ನಾವು ಅರ್ಪಿಸಿಕೊಂಡು ಬಿಡುತ್ತೇವೆ. ಪ್ರಕೃತಿ ಮಾತೆಯ ಸಾನ್ನಿಧ್ಯದಿಂದ ನಾವು ಪುಸ್ತಕದ ಪ್ರಭಾವಕ್ಕೆ ಒಳಗಾಗಿ ಗುರುಮುಖದಿಂದ ಕಲಿಯುವ ನೀತಿ ಪಾಠಗಳಿಂದ ಆತ್ಮವಿಶ್ವಾಸದ ರಹಸ್ಯಗಳನ್ನು ಇನ್ನೂ ಹೆಚ್ಚ ಸ್ಪಷ್ಟವಾಗಿ ಕಲಿಯಲು ಸಾಧ್ಯವಾಗುತ್ತಿದೆ. ಎನ್ನುವುದು ಲೇಖಕರ ಅಭಿಪ್ರಾಯ ಮತ್ತು ವಿಶ್ವಾಸ. ಆತ್ಮಸಾಕ್ಷಾತ್ಕಾರಕ್ಕೆ ಬೇಕಾದ ಅಂತಮುಖತೆ ಪ್ರಕೃತಿಯ ಸಾಮೀಪ್ಯವೇ ಏಕೈಕ ಮಾರ್ಗವೆಂದು ಸಾರುವ ಮಹಾಪ್ರವಾದಿ ಪರಿಸರ ಕಥನಕಾರರದು.

**ಬಿ.ಜಿ.ಎಲ್.ಸ್ವಾಮಿ** ಇವರ ದೃಷ್ಟಿಯಲ್ಲಿ ಆಧ್ಯಾತ್ಮಿಕತೆ: ಜನರು ಗಿಡಮರಗಳ ಮೇಲಿನ ಈ ದೈವೀಭಾವನೆಯೇ ಈಗಿರುವ ಎಷ್ಟೋ ದೇವರ ಕಾಡುಗಳ ಮೂಲಕ ಪರಿಸರ ರಕ್ಷಣೆಗಾಗಿ ಸಾಧ್ಯವಾಗಿದೆ. ಈ ಅಧ್ಯಾತ್ಮದ ದೈವೀಭಾವ ಮೂಲನಿವಾಸಿ ಪರಿಕಲ್ಪನೆಯ ವೈದಿಕ ಸಂಸ್ಕೃತಿಯ ಪ್ರಮುಖ ಅಂಗ. ಇದರಲ್ಲಿ ಜೀವ ಪ್ರಜ್ಞೆಯೇ ಕೇಂದ್ರವಾಗಿದೆ. ಹೇಗೆಂದರೆ "ಸಾಮಾನ್ಯವಾಗಿ ನಮ್ಮ ದೇಶದ ಪ್ರತಿಯೊಂದು ಗ್ರಾಮದಲ್ಲಿಯೂ ಸ್ಥಳೀಯ ದೇವರು ಅಥವಾ ದೇವತೆಯ ಹೆಸರಿನಲ್ಲಿ ಕೆಲವು ಸಸ್ಯ ಪ್ರಾಣಿಗಳನ್ನು ಸಂರಕ್ಷಿಸುತ್ತಾರೆ. ಹಾಗೂ ಅವುಗಳನ್ನು ಪೂಜಿಸುತ್ತಾರೆ. ಸಸ್ಯ ಪ್ರಾಣಿಗಳುಳ್ಳ ಈ ಪೂಜನೀಯ ಸ್ಥಳಕ್ಕೆ 'ದೇವರ ಕಾಡು' ಅಥವಾ 'ನಾಗವನ' ಎಂದು ಕರೆಯುತ್ತಾರೆ. ಪಶ್ಚಿಮ ಘಟ್ಟಗಳು ಹಾಗೂ ನಮ್ಮ ದೇಶದ ಈಶಾನ್ಯ ರಾಜ್ಯಗಳಲ್ಲಿ ದೇವರ ಕಾಡುಗಳು ಹೆಚ್ಚು. ಯಾಕೆಂದರೆ ಅಲ್ಲಿ ಕಾಡುಗಳು ಹೆಚ್ಚು, ದೇವರ ಕಾಡುಗಳು ನಿತ್ಯ ಹರಿದ್ವರ್ಣ ಅರಣ್ಯ ಭಾಗಗಳು. ಆದರೆ ಬಯಲು ಸೀಮೆಯಲ್ಲಿಯ ದೇವರ ಕಾಡುಗಳಲ್ಲಿ ಜೀವ ವೈವಿಧ್ಯ ಕಡಿಮೆ ಸ್ಥಳೀಯ ಜನರಿಗೆ ದೇವರ ಕಾಡುಗಳ ಪೂಜನೀಯ ಸ್ಥಳೀಯ ಜನರು ದೇವರ ಕಾಡುಗಳನ್ನು ದೇವತೆಗಳ ರೂಪದಲ್ಲಿ ಪೂಜಿಸುತ್ತಾರೆ. ದೇವರ

ಕಾಡುಗಳನ್ನು ತಲೆತಲಾಂತರದಿಂದ ಪೂಜಿಸುತ್ತ ಬಂದಿದ್ದಾರೆ. ಇಂದಿಗೂ ಕರ್ನಾಟಕದಲ್ಲಿ ಸುಮಾರು ೬೬,೦೦೦ ರಕ್ಷಿತ ದೇವರ ಅರಣ್ಯ ಪ್ರದೇಶಗಳಿವೆ. ಇಂತಹ ಕಾಡುಗಳಲ್ಲಿ ಅತ್ಯಂತ ವಿರಳವಾದ ಹಾಗೂ ಹೊಸ ಪ್ರಭೇದಗಳನ್ನು ಕಾಣಬಹುದು.

ದೇವರ ಕಾಡುಗಳಲ್ಲಿ ಅನೇಕ ಜೀವ ಪ್ರಬೇಧಗಳು ಸಂರಕ್ಷಿರವಾಗಿವೆ. ಆದರೆ ಅದೇ ಪ್ರಬೇಧಗಳು ಇತರ ಪ್ರದೇಶಗಳಲ್ಲಿ ಕಣ್ಮರೆಯಾಗುತ್ತಲಿವೆ. ಕುನ್ಸ್ಲೇರಿಯಾ ಕೇರಳೆನ್ಸಿಸ್ ಎಂಬ ಸಸ್ಯವು ದೇವರ ಕಾಡುಗಳಲ್ಲಿ ಮಾತ್ರ ಉಳಿದಿವೆ. ದೇವರ ಕಾಡುಗಳಿಂದ ಹಲವಾರು ಜೀವ ಪ್ರಭೇದಗಳು ಉಳಿದುಕೊಂಡಿವೆ. ಅಂದರೆ ದೇವರ ಕಾಡುಗಳ ಜೀವ ವೈವಿಧ್ಯ ರಕ್ಷಣೆಯಲ್ಲಿ ಮಹತ್ವದ ಪಾತ್ರ ವಹಿಸಿದೆ. ದೇವರ ಕಾಡುಗಳು ಕೇವಲ ಅಲ್ಲಿಯ ಪರಿಸರವನ್ನಷ್ಟೇ ರಕ್ಷಿಸುವುದಿಲ್ಲ. ಜೊತೆಗೆ ಸ್ಥಳೀಯ ಜನರಿಗೆ ಉರುವಲು. ಒಣ ಎಲೆ ಹಾಗೂ ಇತರ ಉತ್ಪನ್ನಗಳನ್ನು ಕೊಡುತ್ತವೆ.

ಭಾರತದ ಗ್ರಾಮೀಣ ಜನರ ಈ ನಂಬಿಕೆ ಆಚರಣೆಗಳಿಂದಲೇ ಇಂದು ಅಸ್ಥಿತ್ವದಲ್ಲಿರುವ ಗಿಡ, ಮರ, ಪ್ರಾಣಿ, ಪಕ್ಷಿ, ಅರಣ್ಯಗಳ ರಕ್ಷಣೆಗೆ ಸಾಧ್ಯವಾಗಿದೆ. ಈ ಸಂಸ್ಕೃತಿಯನ್ನೇ ಮೂಲನಿವಾಸಿ ಭಾರತೀಯ ಬೌದ್ಧ ಸಂಸ್ಕೃತಿ ಎನ್ನುವುದು.[೫]

**ಚಂದ್ರಶೇಖರ ನಂಗಲಿ**ಯವರ ಕಾಡು ಮತ್ತು ತೋಪುನಲ್ಲಿ ಇಡೀ ಜೀವ ಸಂಕುಲಗಳ ಜೀವನ ಸಂಸ್ಕೃತಿ, ಧರ್ಮ ಗುಣವನ್ನೆಲ್ಲ ಒಳಗೊಂಡಿವೆ. ಪ್ರಕೃತಿ ಧರ್ಮದಲ್ಲಿ ಒಂದನ್ನು ತಿಂದು ಒಂದು ಬದುಕುವುದೇ ಸ್ವಾಭಾವಿಕಗುಣ. ಇದೇ ಭೂಮಿ ಮೇಲಿನ ಜೀವಿಗಳ ಜೀವನ ಸಂಸ್ಕೃತಿ. ಅಹಿಂಸಾ ಪರಮೋಧರ್ಮ ಎಂಬ ಮಾತು ಪ್ರಕೃತಿಯ ಯಾವ ಜೀವಕ್ಕೂ ಒಗ್ಗಲಾರದು. ಹೀಗಿರವುದೇ ಜೀವಿಗಳ ಜೀವನಧರ್ಮ. ಇದರಿಂದಲೇ ಭೂಮಿ ಜೀವಮಯವಾಗಿದೆ. ಎಂಬುವುದು ಅಲ್ಲಮನ ಸ್ಪಷ್ಟ ನಿಲುವು. ಹೀಗಿರುವ ಪ್ರಾಣಿಗಳ ಗುಣ ಸ್ವಭಾವ ನಡವಳಿಕೆಯ ಜೀವನಕ್ರಮ ಓದುಗಾರರ ಗಮನ ಸೆಳೆಯುತ್ತದೆ.

ಪ್ರಾಣಿಪಕ್ಷಿ ಕೀಟ ಮುಂತಾದ ಭೂಚರ ಹಾಗೂ ಜಲಚರ, ಪ್ರಕೃತಿಜೀವಿಗಳು ಮಾನವನ ಪೂರ್ವಜೀವಿಗಳು. ಇವುಗಳಿಗೆ ತಮ್ಮದೇ ಆದ ನಿಸರ್ಗ ಸಂಸ್ಕೃತಿ ಜೀವನಶೈಲಿ ಮತ್ತು ಇತಿಹಾಸಗಳಿವೆ. ಇವುಗಳನ್ನೆಲ್ಲ ಮಾನವ ತನ್ನ ಚಿಂತನಾಸಕ್ತಿ ಜ್ಞಾನ, ಭಾಷೆ, ಮುಂತಾದ ವೈಶಿಷ್ಟ್ಯ ಗುಣಗಳ ಮೂಲಕ ಮೂಕ ಜೀವಿಗಳ ಸಂಸ್ಕೃತಿಯನ್ನು ಧಕ್ಕಿಷಿಕೊಂಡ ನಂತರ ಅವುಗಳ ಸಂಸ್ಕೃತಿಗೆ ಇದರ ಗುಣ ಬಣ್ಣವನ್ನು ಲೇಪಿಸಿ ಒಬ್ಬರಿಂದೊಬ್ಬರಿಗೆ ಬಿತ್ತುತ ಬಂದು ಕೊನೆ ಕೊನೆಗೆ ಮಾನವ ಸಂಸ್ಕೃತಿಯನ್ನಾಗಿ ಮಾಡಿಕೊಂಡು ಅದನ್ನು ಧಾಮಿಕ ಚೌಕಟ್ಟಿನಲ್ಲಿಟ್ಟನು. ಇದರ ರಕ್ಷಣೆಗಾಗಿ ಧರ್ಮಪ್ರವರ್ತಕರು 'ಧರ್ಮೋರಕ್ಷತಿಃ ರಕ್ಷತಃ' 'ಧರ್ಮವನ್ನು ಯಾರು ರಕ್ಷಿಸುತ್ತಾರೋ ಅವರನ್ನು ಧರ್ಮರಕ್ಷಿಸುತ್ತದೆ' ಎಂಬ ಮಾನವ

ಕೇಂದ್ರಿತ ತತ್ತ್ವ ಮಾತ್ರ ಕವಚವನ್ನು ತೊಡಿಸಿದ್ದಾಳೆ. ಆದಿ ಮಾನವನಿಂದ ಆಧುನಿಕ ಮಾನವರಿಗೆ ಅವನ ಹುಟ್ಟು, ಬೆಳವಣಿಗೆ, ಭಾಷೆ, ಸಂಸ್ಕೃತಿ, ಮುಂತಾದವನ್ನೆಲ್ಲಾ ಶೋಧಿಸುತ್ತಾ ಹೊದರೆ ಇದೆಲ್ಲ ಸ್ಪಷ್ಟವಾಗುತ್ತದೆ. ಮಾನವ ತನ್ನ ಭಾಷೆಯನ್ನು ಹರಿಯುವ ನೀರಿನಿಂದ ಪ್ರಾಣಿ ಪಕ್ಷಿಗಳ ಧ್ವನಿಯಿಂದ ಅನುಕರಿಸಿ ಕಲಿತಿದ್ದಾನೆ. ಭಾಷೆ ವಿಜ್ಞಾನದ ಸಿದ್ಧಾಂತ ಹೇಳುತ್ತದೆ. ಇದೇ ಮನುಷ್ಯ ಪ್ರಕೃತಿಯ ಜೀವ ತತ್ವಾಂಶಗಳುಳ್ಳ 'ಜೀವಸಂಸ್ಕೃತಿ'ಯನ್ನು ಕಲಿತು ಮಾರ್ಪಡಿಸಿಕೊಂಡು ಮಾನವ ಕೇಂದ್ರಿತ ಮನವ ಸಂಸ್ಕೃತಿಯನ್ನಾಗಿ ಮಾಡಿಕೊಂಡು ಅದರಿಂದ ಮಾನವತತ್ವ, ಮಾನವಧರ್ಮ, ಮಾನವೀಯತೆ. ಹೀಗೆ ಏನೆಲ್ಲ ಕರೆದು ಎಲ್ಲವನ್ನು ಮಾನವಮಯ ಮಾಡಿಕೊಂಡಿದ್ದಾನೆ. ಸಂಪೂರ್ಣವಾಗಿ ಒಗ್ಗದ ಬುಡಕಟ್ಟು ಜನರು ಪ್ರಕೃತಿಯ ಜೀವ ಸಂಸ್ಕೃತಿಯನ್ನು ಅದರ ಅಚರಣೆ ಸಂಪ್ರದಾಯ, ನಡವಳಿಕೆ ಮೂಲಕ ಇನ್ನೂ ಉಳಿಸಿಕೊಂಡಿದ್ದಾರೆ. ಹೀಗೆ ಮಾನವ ಪ್ರಕೃತಿಯೊಡನೆ ಭಾವನಾತ್ಮಕ ಸಂಬಂಧವನ್ನು ಹೊಂದಿದ್ದಾನೆ ಎಂದು ಅರಿಯಬಹದು.[೬]

**ನಾಗೇಶ್ ಹೆಗಡೆ**ಯವರ 'ಇರುವುದೊಂದೇ ಭೂಮಿ'ಯಲ್ಲಿ ಪರಿಸರ ಚಳವಳಿಗಳಿಗೇನು ಬರವಿಲ್ಲ. ಪ್ರಕೃತಿ ಭೂಮಿಯ ಸೃಷ್ಟಿ ಸ್ವರೂಪಿ ಗುಣಸ್ವಭಾವಗಳಿರುವ ಸ್ತ್ರೀಯರಿಂದಲೇ ಹುಟ್ಟಿ ಬೆಳೆಯುತ್ತಿರುವುದು ವಿಶೇಷ. ಇದಕ್ಕೆ ಚಿಪ್ಕೋ ಚಳವಳಿಯ ಜನ್ಮದಾತೆ. ಅಮೃತದೇವಿ ಇರಬಹುದು. ಕರ್ನಾಟಕದ ಅಪ್ಪಿಕೋ ಚಳವಳಿಯ ಗೌರವ ದೇವಿ ಇರಬಹುದು. ನರ್ಮದಾ ಬಚಾವೋ ಆಂದೋಲನದ ಮೇಧಾಪಾಟ್ಕರ್, ಸಾಲುಮರದ ತಿಮ್ಮಕ್ಕರಂತಹ ತಾಯಿ ಕರುಗಳುಗಳೇ ಪ್ರಕೃತಿ ಪರಿಸರದ ನೋವು ಹಿಂಸೆಗಳಿಗೆ ಮೊದಲು ಸ್ಪಂದಿಸಬೇಕಾಗಿ ಬಂದಿದೆ ಸಾಕ್ಷಿ. 'ಹೆತ್ತವಳ ಬೇನೆ ಹೆತ್ತವಳಿಗೆ ಗೊತ್ತು' ಎನ್ನುವಂತೆ ಪ್ರಕೃತಿ ಭೂಮಿತಾಯಿಯ ಪ್ರತಿನಿಧಿ ಹೆಣ್ಣೇ ತನ್ನ ಜೀವನದ ಶೋಷಣೆ, ಹಿಂಸೆಗಳ ನೋವಿನಾನುಭವವನ್ನು ಮಾತ್ರ ಹೃದಯದಿಂದ ಪ್ರಕೃತಿಯೊಂದಿಗೆ ಬೆರೆತು ಅದರ ರಕ್ಷಣೆ ಪೋಕ್ಷಣೆಗೆ ಚಳವಳಿಗಳ ಮೂಲಕ ಧುಮುಕಿರುವುದು ಇತಿಹಾಸ. ಇವರ ಚಳವಳಿ ಮತ್ತು ಪ್ರಕೃತಿ ಪ್ರೀತಿಯನ್ನು ಕುರಿತು ನಾಗೇಶ್ ಹೆಗಡೆ ಅವರು ಗ್ರಾಮೀಣ ಜನರಲ್ಲಿ ಆರ್ಥಿಕ ಮುಗ್ಗಟ್ಟು ಹಾಗೂ ಪರಿಸರ ಪ್ರಜ್ಞೆ ಎರಡೂ ಸಮಕಾಲೀನವಾಗಿ ಉದ್ಭವ ಆದದ್ದೇ ಚಿಪ್ಕೋ ಚಳವಳಿಗೆ ನಾಂದಿಯಾಯಿತು. ಇದರಿಂದ ಜೀವಕೇಂದ್ರಿತ ಪ್ರಕೃತಿ ಪರಿಸರ ಪ್ರಜ್ಞೆಯ ಹಸಿರು ಸಮಾಜ ಸ್ಥಾಪನೆಯಾಗುತ್ತದೆ. ಆದ್ದರಿಂದ ಜೀವನ ಚಕ್ರದಲ್ಲಿರುವ 'ಪುನರಪಿ ಮರಣ'ದ ಹತಾಶೆ ಹೋಗಿ 'ಪುನರಪಿ ಜನನದ' ಆಶಾವಾದಿ ಬದುಕಿನ ನಾಳೆಯ ಕನಸು ಈ ಸಮಾಜದ ಕಣ್ತುಂಬಲು ಸಾಧ್ಯ. ಅದಕ್ಕೆ ಸರ್ವರ ಕೈಸೇರಬೇಕು. ಆಗ ಸರ್ವ ಜೀವಿಗಳ ಶಾಂತಿತೋಟ ನೆಲೆಯಾಗುತ್ತದೆ. ಈ ರೀತಿಯಾಗಿ ನಾಗೇಶ್ ಹೆಗಡೆಯವರು ಪರಿಸರ ಸಂರಕ್ಷಣೆಯ ಬಗ್ಗೆ ಅವರಿಗಿದ್ದ ಕಾಳಜಿ ಮತ್ತು ರಕ್ಷಣೆಗಾಗಿ ಅವರು ಜನರಲ್ಲಿ ಆಶಾಭಾವನೆಯನ್ನು ಬಿತ್ತುತ್ತಿದ್ದಾರೆ.

ಇದನ್ನೇ ನಮ್ಮ ಗ್ರಾಮೀಣ ಜನಪದರು ತಿಳಿದೋ ತಿಳಿಯದೆಯೋ ಗಿಡ ಮರ ಪ್ರಾಣಿಪಕ್ಷಿಗಳ ಮೇಲೆ ಹಾಡು ಕಥೆಗಳನ್ನು ಕಟ್ಟಿ ಮಕ್ಕಳಿಗೆ ಹೇಳಿ ಅವುಗಳ ಆಸಕ್ತಿ ಈ ಜೀವಿಗಳ ಮೇಲೆ ಪ್ರೀತಿ ಬೆಳೆಯಲು ಸಹಾಯಕವಾಗಿರುವುದು ಜಾನಪದ ಸಾಹಿತ್ಯದಲ್ಲಿ ದಟ್ಟವಾಗಿದೆ. ಇಂತಹ ಜನಪದ ಸಾಹಿತ್ಯವನ್ನೇ ಬೌದ್ಧ ಸಾಹಿತ್ಯವೆಂದು ಕರೆಯಲು ಅಡ್ಡಿಯಿಲ್ಲ. ಈ ರೀತಿಯಾಗಿ ಪರಿಸರ ಕಥನಗಳಲ್ಲಿ ಆಧ್ಯಾತ್ಮ ಭಾವನೆಯನ್ನು ಕಾಣಬಹುದು.[೭]

ಪಂಪನಿಂದ ಹಿಡಿದು ಇಂದಿನವರೆಗೂ ಕವಿಗಳು ಲೌಕಿಕ ಹಾಗೂ ಅಧ್ಯಾತ್ಮಕ್ಕೆ ಎಂದು ಬೇರೆ ಬೇರೆಯ ಕಾವ್ಯಗಳನ್ನು ಬರೆದರು. ಆದರೆ ಕುಮಾರವ್ಯಾಸನಲ್ಲಿ ಈ ಭೇದವರಿಲಿಲ್ಲ ಎಂದರೆ ಅವನಿಗೆ ಆಧ್ಯಾತ್ಮಿಕ ಹಾಗೂ ಲೌಕಿಕಗಳ ನಡುವೆ ಅಷ್ಟೊಂದು ಅಂತರ ಕಾಣಿಸಿಕೊಳ್ಳಲಿಲ್ಲ. ರತ್ನಾಕರವರ್ಣಿ ಯೋಗಭೋಗಗಳ ಸಮನ್ವಯ ನಡೆಸಲು ಪ್ರಯತ್ನಪಟ್ಟರೂ ಅವನ ಕಾವ್ಯದ ನಾಯಕ ಆಧ್ಯಾತ್ಮಿಕ ಪುರುಷನಾಗಿದ್ದಾನೆ.

ಪ್ರಕೃತಿಯು ಲೇಖಕರಿಗೆ ಆರಾಧನೆಯ ವಸ್ತುವಾಗಿರುವುದರ ಜೊತೆಗೆ ಲೌಕಿಕ ಮತ್ತು ಅಲೌಕಿಕ ವಿಚಾರಗಳೆರಡಕ್ಕೂ ಅದು ಅಭಿವ್ಯಕ್ತಿ ಮಾಧ್ಯಮವಾಗಿದೆ. ಮತ್ತು ಪದ್ಯದಷ್ಟೇ ಮನೋಹರವಾಗಿ ಗದ್ಯದಲ್ಲೂ ಪ್ರಕೃತಿಯನ್ನು ತರಬಲ್ಲರು. ಇಲ್ಲಿ ಪ್ರಕೃತಿ ಆತ್ಮಾನುಸಂಧಾನವಾಗಿರುವುದಲ್ಲದೆ ಭಗದವನು ಸಂಧಾನವಾಗಿಯೂ ಬಂದಿರುವುದು. ವೃಕ್ಷಭೈರವ ಧರ್ಮದೇವತೆಯಾಜ್ಞೆಗಾಗಿ ಕೆಲಸ ಮಾಡುವುದು ಪರಿಸರ ಕಥನಗಾರರಲ್ಲಿ ಪ್ರಕೃತಿಯಲ್ಲಿಯೇ ಭಗವಂತನನ್ನು ಕಾಣುತ್ತಾರೆ. ಪ್ರಕೃತಿಯನ್ನು ತಮ್ಮ ಆತ್ಮಾನಂದದ ಸತ್ಯಕ್ಕೆ ಬಹಿರ್ ಸಾಕ್ಷಿಯಾಗುವಂತೆ ಮಾಡಿಕೊಳ್ಳುತ್ತ ತಮ್ಮ ಆತ್ಮದ ಕಾಂತಿಯ ಭಾವಾಂಶವನ್ನು ಎಲ್ಲ ವಸ್ತುಗಳಲ್ಲಿಯೂ ಕಾಣುತ್ತಾ ಪ್ರಕೃತಿಯ ವಿರಾಟ್ ದರ್ಶನದಲ್ಲಿ ದಿವ್ಯಾನುಭೂತಿಯನ್ನು ಪಡೆದು ಧ್ಯಾನವಶರಾಗಿ ಸಸ್ಯಸೌಂದರ್ಯ ಧಾಮದೆಡೆಗೆ ಮುಳುಗುವ ಕವಿ ಮನೋದರ್ಮವನ್ನು ಈಗ ನಾವು ಗುರುತಿಸಬಹುದು. ಯಾವುದು ವಸ್ತು ನಿಷ್ಟವಾದ ಅಲೆಯ ಅಳತೆ ಮಾತ್ರವೋ ಅದು ಪ್ರಜ್ಞಾಗೋಚರವಾಗುವಾಗ ಬಣ್ಣವಾಗಿ ಆವಿರ್ಭವಿಸುತ್ತದೆ. ನಮ್ಮ ಪ್ರಜ್ಞೆ ಮತ್ತು ಅಲೆಯ ಅಲತೆ ಇವುಗಳ ಸಂಯೋಗದಿಂದ ವರ್ಣ ನಿಷ್ಪತ್ತಿ ಅಥವಾ ಆವಿರ್ಭೂತಿ ಹಾಗೆಯೇ ಋತದ ಸಂಕಲ್ಪ ಒಡೆದು ಮುಡಿದ ಪ್ರಕೃತಿಯ ವಸ್ತು ನಿಷ್ಟವಾದ ಸತ್ಯಾಂಶ ಮತ್ತು ಕವಿಯ ಅನುಭಾವ ವೇದ್ಯವಾದ ಪ್ರಜ್ಞಾನಿಷ್ಠವಾದ ಸತ್ಯಾಂಸ ಇವುಗಳ ಸಂಯೋಗದಿಂದ ಸತ್ಯದ ಪೂರ್ಣಜ್ಞಾನ ಆವಿರ್ಭವಿಸುತ್ತದೆ. ಈ ಪೂರ್ಣಜ್ಞಾನದ ಪೂರ್ಣದರ್ಶನದಿಂದ ಕವಿ ಪೂರ್ಣಾನಂದವನ್ನು ಅನುಭವಿಸುತ್ತಾನೆ.

ಹೀಗೆ ಪ್ರಕೃತಿಯ ಸಮ್ಮೋಹತೆಗೆ ಬೆರಗಾದ ಕವಿಗಳು ಪ್ರಕೃತಿ ಆರಾಧನೆಯೇ ಪರಮನಾರಾಧನೆ ಎಂದು ಭಾವಿಸಿ ಅದರ ಸರ್ವಾಂಗಗಳನ್ನು ವರ್ಣಿಸಿದರು. ಅದರಲ್ಲಿಯೇ

ಭಾವನಾತ್ಮಕತೆಯಲ್ಲಿ ತಳವೂರದೆ ಮೈ ಮರೆದೆ ಅದ್ವಿತೀಯವಾದುದನ್ನು ಸಾಧಿಸಿದರು. ಸೌಂದರ್ಯೋಪಾಸನೆ, ಹಾಗೂ ಆಧ್ಯಾತ್ಮದ ಜೊತೆಗೆ ಲೌಕಿಕ ಚಿಂತನೆಯನ್ನು ನಡೆಸಿ ಜನಪರ ಪ್ರೀತಿಯನ್ನು ಗಳಿಸುವಲ್ಲಿ ಪ್ರಕೃತಿಯನ್ನು ಮಾಧ್ಯಮವನ್ನಾಗಿ ಮಾಡಿ ದುಡಿಸಿಕೊಂಡದ್ದು ಇವರ ವಿಷಯದಲ್ಲಿ ಹೆಗ್ಗಳಿಕೆಯ ಮಾತೆ ಆಗಿದೆ.

**ಪರಿಸರ ಕಥನಗಳಲ್ಲಿ ವೈಚಾರಿಕತೆ**

ಸಾಹಿತ್ಯ ಮೂಲತಃ ಭಾವದ ಅಭಿವ್ಯಕ್ತಿ. ಯಾವುದೇ ಕವಿತೆಯ ಮೂಲದಲ್ಲಿ ಒಂದಲ್ಲಾ ಒಂದು ರೀತಿಯಲ್ಲಿ ಈ ಭಾವವನ್ನು ಅನುಭವಿಸಿರುವ ಕವಿಯ ಚೇತನವೊಂದಿರುತ್ತದೆ. ಇದು ಎಲ್ಲಾ ಕಲೆಗೂ ಕೂಡ ಅನ್ವಯಿಸುವಂತಹದ್ದು. ಈ ಭಾವ ಕವಿಚೇತನ ಅನುಭವಿಸಿ ಅಭಿವ್ಯಕ್ತಿಸಿದ ಒಂದು ಭಾವ ಆ ಅನುಭಾವವನ್ನು ಪ್ರಕಟಿಸುವ ಮಾಧ್ಯಮ ಈ ಕಾವ್ಯವೆಂಬ ಸಾಧನ. ಕವಿಯಾದವನು ತನ್ನ ಮನದಾಳದಲ್ಲಿ ಮೂಡಿದ ಅನುಭವಕ್ಕೆ ಮೂರ್ತ ರೂಪ ಕೊಟ್ಟ ಸಮಾಧಾನವನ್ನು ತಂದುಕೊಳ್ಳುತ್ತಾನೆ. ಇದರಿಂದ ಶಬ್ದಕ್ಕೆ ಭಾವದ ಸ್ಫುಟ ನೀಡಿ ಸುಂದರ ಆಕಾರವನ್ನು ಕೊಟ್ಟು ತನ್ನ ಕಾವ್ಯದ ನಿರ್ಮಾಣದಿಂದ ತನಗೆ ಒದಗಿದ ಸಮಾಧಾನವನ್ನು ಸವಿಯಲು ಬಯಸುತ್ತಾನೆ.

ಮಾನವನ ಜೀವನಕ್ಕೆ ಪ್ರಮುಖವಾದ ಎರಡು ಘಟ್ಟಗಳಿವೆ. ಒಂದು ಸಾಮಾಜಿಕವಾದುದರೆ ಮತ್ತೊಂದು ಆಧ್ಯಾತ್ಮಿಕವಾದದು. ಆದರೆ ಮಾನವ ಈ ಎರಡು ಘಟ್ಟಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಇರುವ ಕಾರಣದಿಂದಾಗಿ ಅವನಲ್ಲಿ ವಿಚಾರಶೀಲ ಪ್ರವೃತ್ತಿಯು ಕುಂಠಿತವಾಗಿರುವುದನ್ನು ಕಾಣಬಹುದು. ಮನುಷ್ಯ ತಾನು ಒಬ್ಬನೇ ಆದರೂ ಅವನು ಅನುಭವಿಸುವ ಬದುಕು ಮಾತ್ರ ಸಮಗ್ರವಾಗಿರಲೇಬೇಕಾಗುತ್ತದೆ. ಮಾನವ ಕಾಲದ ಅಗತ್ಯಕ್ಕೆ ತಕ್ಕಂತೆ ಮೂಡಿಬರುವ ಹೊಸ ಹೊಸ ಚಿಂತನೆಗಳೊಂದಿಗೆ ಮತ್ತು ಕಲ್ಪನೆಗಳೊಂದಿಗೆ ತನ್ನ ಹಿಂದಿನ ಬದುಕಿನ ಅನುಭವದ ವೈಶಾಲ್ಯತೆಯನ್ನು ಸೂಕ್ಷ್ಮವಾಗಿ ಗ್ರಹಿಸಬೇಕಾಗುತ್ತದೆ. ಇಂತ ಸೂಕ್ಷ್ಮಗ್ರಹಿಕೆಗಳು ಮಾನವನ ಜೀವನವನ್ನು ಆಲೋಚನೆಯ ಮೂಲಕ ಅಮೂರ್ತತೆಯಿಂದ ಮೂರ್ತತೆಯ ಕಡೆಗೆ ಸಾಗುವಂತೆ ಮಾಡುತ್ತದೆ.

ಪ್ರತಿಯೊಬ್ಬ ಕವಿಯೂ ಸಾಹಿತ್ಯದಲ್ಲಿ ಅಭಿವ್ಯಕ್ತಿಸುವ ಮೌಲ್ಯಗಳು ಬದುಕಿನ ಪರವಾಗಿಯೂ ಮತ್ತು ಸಾಮಾಜಿಕ ನೈತಿಕ ಮಾನದಂಡಗಳ ಮೇಲೆ ಸಾಹಿತ್ಯದ ಬೆಲೆ ನಿರ್ಧರಿತವಾಗುತ್ತದೆ. ಕವಿ ತನ್ನಲ್ಲಿರುವ ವಿಚಾರಗಳನ್ನು ನೈತಿಕ ಕಾಳಜಿಗಳನ್ನು ಪರಿಗಣಿಸದಿದ್ದರೆ, ಜವಾಬ್ದಾರಿಯಿಂದ ನುಣುಚಿಕೊಂಡಂತೆ. ಆದುದರಿಂದ ಈ ಸಾಮಾಜಿಕ ಹೊಣೆಗಾರಿಕೆ ಎಲ್ಲಾ ಸಾಹಿತ್ಯಕ ಸಂದರ್ಭಗಳಲ್ಲಿ ಹಾಗೂ ಕವಿ ರಚಿಸುವ ಸಾಹಿತ್ಯದಲ್ಲಿ ವ್ಯಕ್ತವಾಗುತ್ತದೆ. ಇದರಿಂದ ಸಾಹಿತ್ಯ ಮತ್ತು ಕವಿ ಆಲೋಚನೆಗಳಿಂದ ಜೀವನದ ಉತ್ತಮ

ಮೌಲ್ಯಗಳನ್ನು ಅಭಿವ್ಯಕ್ತಪಡಿಸಲು ಅಸಮಾನತೆ ಹಾಗೂ ಶೋಷಣೆಯ ವ್ಯವಸ್ಥೆಯನ್ನು ಪ್ರಶ್ನಿಸುತ್ತ ಉತ್ತರವನ್ನು ಸಾಹಿತ್ಯದ ಮುಖೇನ ಕವಿ ಹುಡುಕುತ್ತ ಹೊರಡುತ್ತಾನೆ. ಈ ದಾರಿಯಲ್ಲಿ ರಚನೆಗೊಂಡ ಕಾವ್ಯಾಭಿವ್ಯಕ್ತಿ ವಿಚಾರವಾಗಿ ಹೊಮ್ಮುತ್ತದೆ.

ವಿಚಾರ ಸಾಹಿತ್ಯ ಮುಖ್ಯವಾಗಿ ಸಮಾಜದ ಸೂಕ್ಷ್ಮವಾದ ವಿಚಾರಗಳನ್ನು ಪಟ್ಟಭದ್ರತೆ-ಯನ್ನು ವಿಮರ್ಶೆ ಮಾಡುತ್ತದೆ. ಮೂಲತಃ ಮನುಷ್ಯರ ಸಂಪ್ರದಾಯಿಕ ಬಂಧನಗಳ ಕಟ್ಟುಪಾಡುಗಳಿಂದ ಬಿಡುಗಡೆ ಮಾಡುವ ಪ್ರಯತ್ನವನ್ನು ಮಾಡುತ್ತದೆ. ಒಬ್ಬ ಮನುಷ್ಯ ವಿಚಾರ ಮಾಡತೊಡಗಿದನೆಂದರೆ ಅವನು ಅಷ್ಟರಮಟ್ಟಿಗೆ ಬಿಡುಗಡೆ ಹೊಂದಿದನೆಂದೇ ಅರ್ಥ. ವಿಚಾರ ಸಾಹಿತ್ಯ ಮುಖ್ಯವಾಗಿ ತಾರ್ಕಿಕವಾದದ್ದು ಮತ್ತು ತನ್ನನ್ನು ತಾನೇ ಅಧ್ಯಯನಕ್ಕೆ ಒಳಗು ಮಾಡಿಕೊಳ್ಳುವ ವಿಚಾರ ಹಾಗೇ-ದೇವರು, ಧರ್ಮ, ಸಮಕಾಲೀನ ಸಮಸ್ಯೆಗಳು ಮನುಷ್ಯನ ಅಧ್ಯಯನವೂ ಆಗುತ್ತದೆ. ಆ ಮೂಲಕ ಸಮಾಜದಲ್ಲಿ ನಡೆಯುವ ವಂಚನೆ, ಮೋಸ, ಭ್ರಷ್ಟತೆ, ದೇವರ ಹೆಸರಲ್ಲಿ ಸೃಷ್ಟಿಯಾದ ಪುರೋಹಿತಶಾಹಿ ಇವೆಲ್ಲವೂ ಈ ಹಿನ್ನೆಲೆಯಲ್ಲಿ ಜೀವ ಪಡೆದವು. ಭಾರತೀಯ ತತ್ತ್ವಶಾಸ್ತ್ರ ದೇಹ ಮತ್ತು ಆತ್ಮಗಳ ವಿಚಾರವಾಗಿಯು ಮನುಷ್ಯನನ್ನು ಕಡೆಗಣಿಸಿದುದು ಹಗೆಯೇ ದೇವರ ಪ್ರಭಾವಳಿಯೇ ಧರ್ಮ ಬಸವಣ್ಣನವರ ಪ್ರಕಾರ 'ದಯೆಯೇ ಧರ್ಮದ ಮೂಲ' ಹುಟ್ಟಿನ ಶ್ರೇಷ್ಠತೆಯ ಕಾರಣದಿಂದ ಆರಂಭವಾಗಿ ಒಂದು ನಿಗಧಿತ ಪದ್ಧತಿಯನ್ನು ಅನುಸರಿಸುವವರಿಗೆ ಧರ್ಮ ಜೀವಂತವಾಗಿರುತ್ತದೆ.[೮]

ಪ್ರಾಣಿಗಳಲ್ಲೆಲ್ಲಾ ಅತ್ಯಂತ ಬುದ್ಧಿವಂತನೆನಿಸಿಕೊಂಡಿರುವುದು ಮಾನವನೇ ಅತಿಯಾದ ಭಾವನೆಗಳ ಅತಿರೇಕದಿಂದ ಅನೇಕ ಅವೈಚಾರಿಕ ಸಂಗತಿಗಳಿಗೂ ಕಾರಣನಾಗುತ್ತಾನೆ. ಅವನಲ್ಲಿ ಮನೆ ಮಾಡಿರುವ ತಾನು ತನ್ನವರು ಎನ್ನುವ ಸ್ವಾರ್ಥ ಹಾಗೂ ಅತಿಯಾದ ಆಸೆಗಳಿಂದ ಅಧಿಕಾರಶಾಹಿ ಮನೋಭಾವನೆಗೆ ಅಸ್ಪಷ್ಟತೆಗೆ ಅನರ್ಥತೆಗಳಿಗೆ ಕಾರಣನಾಗುತ್ತಾನೆ. ಇಂಥ ವ್ಯಕ್ತಿಗಳು ಸುಸಂಬಂಧ ಸಮಾಜದ ನಿರ್ಮಾಣದ ಬದಲಿಗೆ ಇರುವ ಸಮಾಜದ ವ್ಯವಸ್ಥೆಯನ್ನೆ ಕದಡಿ ಸಂಕೀರ್ಣತೆಗೆ ಕಾರಣರಾಗುತ್ತಾರೆ. ಇದು ಸಮಾಜದ ದುರ್ಬಲ ವರ್ಗದವರ ಮೇಲೆ ಬೀರುವ ಪ್ರಭಾವದಿಂದಾಗಿ ಅವರು ತತ್ತರಿಸಿ ಹೋಗುತ್ತಾರೆ. ಅವರ ಈ ಸ್ಥಿತಿಯ ಅನುಭವದ ಒಳಗಿನಿಂದಲೇ ಅನೇಕ ಚೇತನಗಳು ಹುಟ್ಟಿಕೊಂಡವು. ಇಂತಹ ಸಂದರ್ಭದಲ್ಲಿ ಬುದ್ಧ, ಬಸವ, ಗಾಂಧಿ, ವಸು ಪೈಗಂಬರ್, ಮಾರ್ಕ್ಸ್, ಪರಮಹಂಸ, ವಿವೇಕಾನಂದ, ಅರವಿಂದ ಮುಂತಾದ ಅನೇಕ ಚಿಂತಕರು. ಸಮಾಜ ಸುಧಾರಕರು ಹುಟ್ಟಿ ಬಂದು ನಿರ್ದಿಷ್ಟ ಗುರಿಯನ್ನು ಕಾಣದೆ ತೊಳಲುತ್ತಿರುವ ದುಃಖ ತಪ್ತಜನರಿಗೆ ಪರಿಕಾರಣ-ವನ್ನು ಒದಗಿಸಿ ಜನಜೀವನವನ್ನು ಸರಳಗೊಳಿಸಲು ಪ್ರಯತ್ನಿಸಿರುವುದು ಒಂದು ಅನಿವಾರ್ಯ ಪ್ರಕ್ರಿಯೆನಿಸಿಕೊಂಡಿದೆ. ಇವರುಗಳು ಒಂದೇ ಕ್ಷೇತ್ರವನ್ನು ತಮ್ಮ ಕಾರ್ಯರಂಗವನ್ನಾಗಿ

ಮಾಡಿಕೊಳ್ಳದೆ ಚಾರಿತ್ರಿಕ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ವಿಚಾರಗಳ ಹಿನ್ನೆಲೆಯನ್ನು ಹೊಂದಿದ್ದರು. ವೈಚಾರಿಕತೆಗೆ ಪ್ರಪಂಚದಾದ್ಯಂತ ತನ್ನದೇ ಆದ ಒಂದು ವಿಶಿಷ್ಟ ಪರಂಪರೆಯಿರುವುದನ್ನು ಗಮನಿಸಬಹುದು. ಹಿಗೆ ಬೆಳೆದು ಬಂದ ವೈಚಾರಿಕತೆಯನ್ನು ಸಹಿತ್ಯ ಮೂಲಕ ಜನರಿಗೆ ಹೇಗೆ ಮುಟ್ಟಿಸಲು ಪ್ರಯತ್ನಿಸಿತು ಎನ್ನುವುದನ್ನು ಈ ಅಧ್ಯಾಯದ ಮೂಲಕ ವಿಚಾರ ಮಾಡುವುದೇ ಆಗಿದೆ.

ಹೀಗೆ ತತ್ತ್ವಜ್ಞಾನಿಗಳು, ಸಾಹಿತಿಗಳ ಹಾಗೂ ಸಮಾಜದ ಚಿಂತಕರ ವಿವಿಧ ವಿಚಾರ ಧಾರೆಯನ್ನೊಳಗೊಂಡ ಕನ್ನಡ ವೈಚಾರಿಕ ಸಾಹಿತ್ಯ ಸಮೃದ್ಧವಾದುದು ಒಂದು ಸಮಾಜದಲ್ಲಿನ ಶಕ್ತಿ ಆ ಸಮಾಜದ ಬೌದ್ಧಿಕ ಸಂಪತ್ತನ್ನು ಕುರಿತದ್ದಾಗಿರುತ್ತದೆಂಬುದನ್ನು ನಾಮ ಎಲ್ಲಿಯವರೆಗೆ ತಿಳಿಯುವುದಿಲ್ಲವೋ ಅಲ್ಲಿಯ ತನಕ ವಿಚಾರ ಸಾಹಿತ್ಯಕ್ಕೆ ನಾವು ಸರಿಯಾದ ಪುರಸ್ಕಾರವನ್ನು ಕೊಡಲಾರೆವು.

ಕುವೆಂಪು ಅವರ ಪರಿಸರ ಕಥನದಲ್ಲಿ ನಾವು ಹಲವು ವೈಚಾರಿಕ ಅಂಶಗಳನ್ನು ಕಾಣಬಹುದು. ಎರಡುವಾರದಿಂದ ಅಣ್ಣಪ್ಪ ರೇಷ್ಮೆ ಖಾಯಿಲೆಯಿಂದ ಬಳಲುತ್ತಿದ್ದಾನೆ. ಬಾಯಿಯಿಂದ ರಕ್ತಕಾರುತ್ತಿದ್ದಾನೆ. ಆಸ್ಪತ್ರೆಗೆ ಹೋಗುವ ಬದಲು "ಚೌಡಿಯ ಕಾಟ' ಎಂದು ಪೂಜಾರಿಯ ಹತ್ತಿರ ಹೋಗಿ ವಿಭೂತಿ, ಬಸ್ಮವನ್ನು ತೆಗೆದುಕೊಂಡು ಬಂದಿರುವುದನ್ನು ಗಮನಿಸಬಹುದು. ಜನಗಳು ಖಾಯಿಲೆಯಾದರೆ ಮೊದಲು ದೆವ್ವಕ್ಕೆ ಹೇಳಿಕೊಳ್ಳುತ್ತಾರೆ. ಅಮೇಲೆ ಸರ್ವಜ್ಞಮೂರ್ತಿಗಳಾದ ಒಬ್ಬರು ಶಾಸ್ತ್ರಿಗಳು ಮುಂತಾದವರೊಡನೆ ನಿಮಿತ್ತ ಕೇಳಿಸಿ ಅವರು ಕೊಟ್ಟ ಬೂದಿಯನ್ನು ಹಚ್ಚುತ್ತಾರೆ. ಅಥವಾ ತಿನ್ನಿಸುತ್ತಾರೆ ತರುವಾಯ ತನಗೆ ತಾನೇ ವೈದ್ಯನಾಗಿಬಿಟ್ಟು ಯಾವನೋ ಒಬ್ಬನಿಂದ ಏನೋ ಔಷಧಿ ಕೊಡಿಸುತ್ತಾರೆ. ಕಡೆಯಲ್ಲಿ ಹೋಗಿ ಅಪರಿಹಾರ್ಯವಾದ ದುವಸ್ಥೆಗಿಳಿದ ಮೇಲೆ ಆಸ್ಪತ್ರೆಗೆ ಓಡುತ್ತಾರೆ. ಡಾಕ್ಟರು ಏನಾದರೂ ಔಷಧಿ ಕೊಟ್ಟರೆ ಅದನ್ನು ಕುಡಿಸುತ್ತಾರೆ. ತಮಗೆ ತಿಳಿದ ಮದ್ದುಗಳನ್ನು ತಿನ್ನಿಸುತ್ತಾ ದೆವ್ವ ಭೂತಗಳಿಗೆ ಹರಕೆ ಒಪ್ಪಿಸುತ್ತಾ ಸಾಕಾದಷ್ಟು ಅಪಥ್ಯ ಮಾಡುತ್ತಾ ಅದೃಷ್ಟವಶಾತ್ ರೋಗಿ ಬದುಕುಳಿದರೆ ಅದನ್ನನು ಭಟ್ಟರ ಭಸ್ಮಕ್ಕೂ ದೆವ್ವದ ಕೃಪೆಗೆ ಆರೋಪಿಸಿ, ರೋಗಿ ಸತ್ತರೆ ಅದನ್ನು ಆಸ್ಪತ್ರೆಗೆ ಡಾಕ್ಟರ್ ಔಷಧಿಗೆ ಆರೋಪಿಸಿ ತಮ್ಮ ಅನುಭವದ ಜ್ಞಾನ ಭಂಡಾರವನ್ನು ಇತರರಿಗೂ ಹಂಚುತ್ತಾರೆ. ಹೀಗೆ ಅವಿವೇಕ ಒಂದು ಹೆಮ್ಮರವಾಗಿ ಬೆಳೆಯುತ್ತಾ ಹೋಗುತ್ತದೆ.[೯]

**ತೇಜಸ್ವಿಯವರ** ಪರಸರ ಕತೆಯಲ್ಲಿ ವೈಚಾರಿಕತೆಯನ್ನು ಕಾಣಬಹುದು. ತೇಜಸ್ವಿ ಅವರು ಮನೆಯ ಹೊರಗಡೆ ಬಿಟ್ಟ ಚಪ್ಪಲಿ ಪ್ರತಿದಿನ ನಾಯಿ ಕಚ್ಚಿಕೊಂಡು ತೋಟದ ಕಡೆಯೋ ಅಥವಾ ಹಳ್ಳದ ಕಡೆಗೋ ತೆಗೆದುಕೊಂಡು ಕಚ್ಚಿ ಬೀಸಾಡುತ್ತಿತ್ತು. ಅದನ್ನು ಮತ್ತೆ

ಹುಡುಕಿ ತರೋದೆ ಒಂದು ದೊಡ್ಡ ಕೆಲಸವಾಗುತ್ತಿತ್ತು. ಇದನ್ನೆಲ್ಲ ಗಮನಿಸಿದ ಪ್ಯಾರ ಮತ್ತು ಮಾರ ತೇಜಸ್ವಿಯವರ ಚಪ್ಪಲಿಯನ್ನು ಅದಲು ಬದಲು ಮಾಡುತ್ತಿದ್ದರು. ಅಂದರೆ ಎಡದ ಕಾಲಿನ ಚಪ್ಪಲಿಯನ್ನು ಬಲಗಡೆ ಇಡುತ್ತಿದ್ದರು. ಆ ರೀತಿ ಮಾಡಿದ ಮೇಲೆ ಚಪ್ಪಲಿಯನ್ನು ನಾಯಿ ಮುಟ್ಟುತ್ತಿರಲಿಲ್ಲ. ಆದರೆ ತೇಜಸ್ವಿಯವರಿಗೆ ಇದು ಬಹಳ ಕಿರಿಕಿರಿಯಾಗುತ್ತಿದ್ದು ಇದನ್ನು ಮಾರನ ಹತ್ತಿರ ವಿಚಾರಿಸಿದಾಗ ಈ ರೀತಿ ಮಾಡಿದ್ದಾರೆ. ನಾಯಿ ನಿಮ್ಮ ಚಪ್ಪಲಿಯನ್ನು ಮುಟ್ಟುವುದಿಲ್ಲ. ಮೌಢ್ಯತೆಯ ಬಗ್ಗೆ ಅವನು ಮಾತನಾಡುತ್ತಿದ್ದ ಚಪ್ಪಲಿ ಅದಲಿ ಬದಲಿ ಇಟ್ಟರೆ ದೆಯ್ಯದ ಮಟ್ಟು ಎಂದು ತಿಳಿದುಕೊಂಡು ಅದನ್ನು ಮುಟ್ಟೋದಕ್ಕು ಹೆದರ್ತವೆ. ದೆವ್ವಕ್ಕೂ ಕಾಲುಗಳು ಅದಲಿಬದಲಿ ಇರುತ್ತವೆ ಎಂದು ತನ್ನ ತಂತ್ರದ ಹಿಂದಿನ ಸಿದ್ಧಾಂತವನ್ನು ವಿವರಿಸಿದ.

ಇದೆಲ್ಲ ಗಮನಿಸಿದೆ ಮೌಢ್ಯತೆ ಇನ್ನೂ ನಮ್ಮನ್ನು ಕಾಡುತ್ತಿದೆ. ದೇವರ ಮೇಲೆ ದೆವ್ವದ ಮೇಲೆ ಭಯಭಕ್ತಿ ಇರುವುದಿರಂದ ನಾವು ಇದನ್ನು ಪಾಲಿಸುತ್ತ ಬಂದಿದೆ. ಮೌಢ್ಯತೆಯನ್ನು ನಮ್ಮ ಅಂತರಾಳದಿಂದ ತೆಗೆದು ಹಾಕುವವರೆಗೂ ಅದು ನಮ್ಮನ್ನು ಬಿಟ್ಟು ಹೋಗುವುದಿಲ್ಲ. ಅದು ಕಾಲಕಾಲಕ್ಕೆ ವಿಸ್ತಾರ ಹೊಂದುತ್ತ ಹೋಗುತ್ತದೆ ಎಂದು ಹೇಳಬಹುದು. ಈ ವಿಜ್ಞಾನ ತಂತ್ರಜ್ಞಾನದ ಕಾಲದಲ್ಲೂ ಇದನ್ನು ನಂಬುವುದು ವಿಷಾದನೀಯವಾಗಿದೆ.[೧೦]

**ಬಿ.ಜಿ.ಎಲ್.ಸ್ವಾಮಿಯವರ** 'ಹಸುರು ಹೊನ್ನು' ಪರಿಸರ ಕಥನದಲ್ಲಿ ವೈಚಾರಿಕತೆಯನ್ನು ಗಮನಿಸುವುದಾದರೆ ಬಿ.ಜಿ.ಎಲ್ ಸ್ವಾಮಿಯವರು ಸಸ್ಯ ಸಂಶೋಧನೆಗಾಗಿ ವಿದ್ಯಾರ್ಥಿ-ಗಳೊಂದಿಗೆ ಅರಣ್ಯ ಪ್ರದೇಶಗಳಿಗೆ ಹೋಗುತ್ತಾರೆ. ಅವರ ವಿದ್ಯಾರ್ಥಿಗಳಲ್ಲಿ ಒಬ್ಬನಾದ ಶಿಂಗನಿಗೆ ರಾತ್ರಿ ಜ್ವರ ಹಿಡಿದಿತ್ತು. ಬಲವಾಗಿ ಸೀನುತ್ತಿದ್ದ ಅವನಿಗೆ ಮೊದಲು ವೈದ್ಯ ಚಿಕಿತ್ಸೆ ಕೊಡಿಸಬೇಕೆಂದು ಅಲ್ಲಿಯೇ ಹತ್ತಿರದಲ್ಲಿದ್ದ ಸರ್ಕಾರಿ ಆಸ್ಪತ್ರೆಗೆ ಕರೆದುಕೊಂಡು ಹೋದಾಗ ಅವನನ್ನು ತಪಾಸಣೆ ಮಾಡುವುದರ ಬದಲು ಅವನ ಬಳಿ ಹೋಗಿ ಯಾವುದನ್ನಾದರೂ ನೋಡಿ ಭಯಗೊಂಡೆಯಾ...? ಎಂದು ಕೇಳುತ್ತಾನೆ. ಮತ್ತೆ ಶಿಂಗನ ಬೆನ್ನನ್ನು ಮೂಸಿ ನೋಡಿ ರವೆಯಷ್ಟು ಚಳಿಯಿದೆ. ಪ್ರಾಣಿಭಯವಿಲ್ಲ ಎಂದು ಕಾಂಪೌಂಡರು ಹೇಳಿದ ತದನಂತರ ವೈದ್ಯರು ಶಿಂಗನ ಕಣ್ಣೆತ್ತಿಯೂ ಕೂಡ ನೋಡದೇ ಈ ಮದ್ದು ಕುಡಿಯಲಿ ಗುಣವಾಗುತ್ತದೆ. ಗುಣವಾಗದಿದ್ದರೆ ಮೂರುದಿನ ಬಿಟ್ಟು ಬನ್ನಿ ಎಂದು ಹೇಳಿಕಳುಹಿಸಿದ.

ಇದನ್ನೆಲ್ಲಾ ಗಮನಿಸಿದರೆ ಈ ಯುಗದಲ್ಲಿ ಎಷ್ಟೆಲ್ಲಾ ತಂತ್ರಜ್ಞಾನ ಬೆಳೆದಿದ್ದರೂ ಅಲ್ಲಿನ ವೈದ್ಯರು ರೋಗಿಯನ್ನು ಮುಟ್ಟಿ ನೋಡದೆ ಧನ್ವಂತರಿ ದೇವನ ರೀತಿಯಲ್ಲಿ ಚಿಕಿತ್ಸೆ ನೀಡುವುದು ಎಷ್ಟರಮಟ್ಟಿಗೆ ಸರಿ ಅನ್ನಿಸುತ್ತದೆ. ಅಷ್ಟೇ ಅಲ್ಲದೇ ಕನ್ಸರ್ ವೇಟರ್ ಎಂಬ ಅರಣ್ಯಾಧಿಕಾರಿ ಅಲ್ಲಿನ ಸಸ್ಯಗ ಬಗ್ಗೆ ಪರಿಚಯಿಸುತ್ತಿರುವಾಗ ಡೈಸಿ, ಶೀನಿದಳು ತಕ್ಷಣ ಅವನು

ಗಾರ್ಡ್‌ನು ಕರೆದು ಯಾವುದೋ ಮರವನ್ನು ತೋರಿಸಿ 'ಕಡಿದುಕೊಂಡು ಬಾ' ಎಂದು ಅದರ ಗಾತ್ರವನ್ನು ಕೈಯಿಂದ ಅಭಿನಯಿಸಿ ಗಾರ್ಡು ತಂದ ತುಂಡು ಎರಡಡಿ ಉದ್ದ ಒಂದಡಿ ದಪ್ಪ ದಿಮ್ಮಿ ಬಲವಂತವಾಗಿ ಅದನ್ನು ಡೈಸಿಯ ಹೆಗಲ ಮೇಲೆ ಏರಿಸಿಟ್ಟು, ಹಸಿವಾಸನೆಯನ್ನು ಮೂಸಿ ನೋಡುತ್ತಿರು ಸೀನು ನಿಲ್ಲುತ್ತದೆ ಎಂದು ಒತ್ತಾಯ ಪಡಿಸುತ್ತಾನೆ. ಈ ರೀತಿಯಲ್ಲಿ ಹಲವು ವೈಚಾರಿಕ ಅಂಶಗಳನ್ನು ಹಸುರು ಹೊನ್ನು ಎಂಬ ಪರಿಸರ ಕಥನದಲ್ಲಿ ನಾವು ಗಮನಿಸಬಹುದು.[೧೧]

**ನಾಗೇಶ್ ಹೆಗಡೆ:** ಇವರ ದೃಷ್ಟಿಯಲ್ಲಿ ವೈಚಾರಿಕತೆಗೆ ಮಾನವನ ಅಜ್ಞಾನ, ಆಸೆಬುರುಕುತನ ಹಾಗೂ ಜೀವಿಗಳ ಬಗೆಗಿನ ಅಸಡ್ಡೆಯಿಂದಾಗಿಯೇ ನಿಸರ್ಗ ಧ್ವಂಸವಾಗುತ್ತಿದೆ. ಅಜ್ಞಾನವೊಂದರಿಂದಾಗಿಯೇ ಈ ಹಿಂದೆ ಮನುಷ್ಯ ಹಾಳುಗೆಡವಿದ್ದನ್ನೆಲ್ಲ ಕ್ಷಮಿಸಿ ಬಿಡಬಹುದು. ಆದರೆ ಇಂದು ನಮಗೆ ನಿಸರ್ಗ ಕುರಿತು ಹೇರಳ ಮಾಹಿತಿ ಸಿಗುತ್ತದೆ. ಪೂರ್ವಜರಿಂದ ಪಡೆದಿದ್ದೇನು...? ನಮ್ಮಿಂದಾಗುತ್ತಿರುವ ತಪ್ಪುಗಳೇನು...? ಮುಂದಿನವರೆಗೆ ಉಳಿಸಬೇಕಾದುದು ಏನನ್ನು ಎಂಬ ಪ್ರಶ್ನೆಗಳಿಗೆ ನೈತಿಕವಾದ ಉತ್ತರ ಸಿಗಬೇಕಾಗಿದೆ. ಖಂಡಿತವಾಗಿಯೂ ನಮ್ಮದು ಪರ್ವ ಕಾಲದ ಪೀಳಿಗೆ. ವಿಜ್ಞಾನ ತಂತ್ರಜ್ಞನದಲ್ಲಿ ನಮ್ಮ ಸಾಧನೆ ಎಷಟೇ ಇದ್ದರೂ ಅದಕ್ಕೆ ಸರಿಸಾಟಿಯಾಗಿ ನಮ್ಮ ವೈಫಲ್ಯಗಳೂ ಗುಡ್ಡದಷ್ಟಿವೆ. ಇತರ ಜೀವರಾಶಿಯನ್ನು ಹೊಸಕಿ ಹಾಕಿದ್ದು ನಮ್ಮವರೇ ಹಸಿವಿನಿಂದ ಸಾವನ್ನಪ್ಪುತ್ತಿರುವುದೂ ಈ ವೈಫಲ್ಯಗಳ ದ್ಯೋತಕವಾಗಿದೆ. ನಮ್ಮ ಮೇಲೆ ಅಪಾರ ಹೊಣೆ ಇದೆ. ಅದನ್ನು ನಿಭಾಯಿಸುವ ಸಾಮರ್ಥ್ಯವೂ ನಮಗಿದೆ. ಈಗಲಾದರೂ ಕಾರ್ಯ ಪ್ರವೃತ್ತರಾಗೋಣ ಕಾಲ ಮಿಂಚಿಲ್ಲ.

ಈ ಜಗತ್ತಿನ ಪ್ರತಿ ಪ್ರಜೆಯು ಈ ಮಾತಿನ ಸಾರ, ಸತ್ವ, ಸತ್ಯ, ಮಹತ್ವವನ್ನರಿತು ಸಾಗುವ ಕಾರ್ಯ ಪ್ರವೃತ್ತಿಯಿಮದ ಮಾತು ಸಾಧ್ಯ. ಈ ಆಶಯದಿಂದ ಭೂಮಿ ಪ್ರಕೃತಿಯ ಇಡೀ ಜೀವ ಜಗತ್ತೇ ಸರ್ವಕಾಲ ಸೃಜನಶೀಲವಾಗಿ ಅರಳಿ ಬಾಳಲಿ ಎಂಬ ಹಾರೈಕೆಯನ್ನು ನಾಗೇಶ್ ಹೆಗಡೆಯವರು ಇರುವುದೊಂದೆ ಭೂಮಿಯಲ್ಲಿ ತಮ್ಮ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ.

ಪೂರ್ಣ ವಿಚಾರವಂತೆ ಮನಸ್ಸು ಈ ಬಾಹ್ಯ ಲೋಕದ ವಿವಿಧ ವಿನ್ಯಾಸಗಳ ರಹಸ್ಯ ಶೋಧದಲ್ಲಿ ತೊಡಗುವಂತೆ ಅಂತರಂಗದ ಲೋಕಕ್ಕೆ ಪ್ರವೇಶಿಸಿ ಈ ಲೋಕಕ್ಕೂ ತನಗೂ ಇರುವ ಸಂಬಂಧವನ್ನು ಅರಿಯುವ ಸಾಹಸಕ್ಕೂ ತೊಡಗುತ್ತದೆ. ಈ ಸೃಷ್ಟಿ ವಿಕಾಸದ ತುತ್ತತುದಿಯಲ್ಲಿರುವ ಮಾನವನ ಮನಸ್ಸು ಅಂತರಾಲೋಚನೆಯ ಹಂತವನ್ನು ತಲುಪಿದಂದಿನಿಂದ ಜಗತ್ತಿನ ಎಲ್ಲ ಭಾಗಗಳಲ್ಲಿಯೂ ಈ ಪರಿಕಲ್ಪನೆಯನ್ನು ಕುರಿತು ಪರಿಭಾವನೆ ಒಂದಲ್ಲ ಒಂದು ರೂಪದಲ್ಲಿ ನಡೆಯುತ್ತಲೇ ಬಂದಿದೆ. ಜೀವ, ಜಗತ್ತು, ಈಶ್ವರ

ಇವುಗಳ ಸ್ವರೂಪವನ್ನು ಸಂಬಂಧವನ್ನು ಅರಿಯುವ ಪ್ರಯತ್ನವೇ ಮಾನವನ ಬಹುಮುಖ ಜ್ಞನದ ಮೂಲ ಪೂರಕ ಶಕ್ತಿ. ಇನ್ನೊಂದು ಕಡೆಯಲ್ಲಿ ಈ ಬದುಕಿನ ವಿವಿಧ ಸಮಸ್ಯೆಗಳನ್ನು ವ್ಯಕ್ತಿಗಳ ಪರಸ್ಪರ ಸಂಬಂಧಗಳನ್ನು ಹೋರಾಟಗಳನ್ನು ಎದುರಿಸುವ ಸಮಾಜ ರಾಜಕೀಯ, ಆರ್ಥಿಕ ವಲಯಗಳ ವಿಶ್ಲೇಷಣೆಯಲ್ಲಿ ಬೆಳೆದು ಬಂದಿದೆ. ಈ ಬಾಹ್ಯ ಜಗತ್ತಿನ ವಿರಾಟ್ ರೂಪದ ರಹಸ್ಯವನ್ನು ಪ್ರಯಾಗ ಪರೀಕ್ಷೆಗಳಿಂದ ಕಂಡುಕೊಳ್ಳುವ ಪ್ರಯತ್ನ ವಿಜ್ಞಾನದ ವಿವಿಧ ಶಾಖೆಗಳಾಗಿ ಬೆಳೆಯುತ್ತಿದೆ.

ಪರಿಸರ ಕಥನಗಳಲ್ಲಿ ವೈಚಾರಿಕತೆ ಗಮನಿಸುವುದಾದರೆ ನಮ್ಮ ಹೃದಯವೇ ನಮಗೆ ಧರ್ಮಸೂತ್ರ ಈ ಸೂತ್ರ ಹೃದ್ಗತವಾದಾಗ ಮಾತ್ರ ನಿಜವಾದ ಸ್ವಾತಂತ್ರ್ಯ ಸಿಕ್ಕಂತಾಗುತ್ತದೆ. ಭಾರತೀಯರಿಗೆ ಪ್ರಕೃತಿಗೆ ಹೇಗೆ ಕವಿಯ ಹೃದಯ ಮಿಡಿಯುತ್ತದೆ, ಕನ್ನಡ ನಾಡಿನ ಗತವೈಭವವನ್ನು ನೆನೆದು ಕನ್ನಡ ಜನರಲ್ಲಿ ಧೈರ್ಯೋತ್ಸಾಹ ಹಾಗೂ ಸ್ವಾಭಿಮಾನ, ದೇಶಭಕ್ತಿ, ತ್ಯಾಗಶೀಲಗಳನ್ನು ತುಂಬಿ, ನವಚೈತನ್ಯ ನೀಡಿ ಅವರ ನರಗಳನ್ನು ಉಕ್ಕಿನ ತಂತಿಗಳನ್ನಾಗಿ ಮಾಡುವ ಶಕ್ತಿ ಕುವೆಂಪು ಅವರ ಈ ಕನ್ನಡ ಪರಿಸರ ಕಥನಗಳಿಗಿದೆ. ಪ್ರಪಂಚದ ದುಃಖ ದಾರಿದ್ರ್ಯಗಳಿಗೆ ಲೇಖಕರ ಹೃದಯ ಮಿಡಿಯದೆ ಪರಿಸರದ ಸೌಂದರ್ಯ ಸಂಪತ್ತಿನಲ್ಲಿ ತೇಲಾಡುವಂತೆ ಹಲವು ಕಡೆ ನಡೆದ ಭೀಕರ ಭೂಕಂಪನ ಅವರ ಎದೆಯನ್ನು ಜರ್ಜರಗೊಳಿಸಿದೆ. ದುಃಖ ಮಡುಗಟ್ಟಿದೆ ಭಗವಂತನ ಸೃಷ್ಟಿಯಲ್ಲಿ ಈ ವಿಭೇದಗಳ ಪರಂಪರೆಗೆ ಕಾರಣೇನು? ಏತಕ್ಕಾಗಿ ಈ ಕ್ರೌರ್ಯ ಅವನಲ್ಲಿ ಮನೆಮಾಡಿದೆ? ಎಂಬ ಸಮಸ್ಯೆಗಳಿಗೆ ಜಟಿಲತೆಗೆ ಉತ್ತರವನ್ನು ಕಂಡುಕೊಳ್ಳಲು ಪ್ರಯತ್ನಿಸಿದರು ಅದು ನಿರಾಶವಾದವಾಗುತ್ತದೆ.[೧೨]

ಸೌಂದರ್ಯ ದರ್ಶನ ಮತ್ತು ತನ್ಮಯತೆ ಒಂದು ವಿಶಿಷ್ಟ ಘಟಟವೇ ಸರಿ. ಪ್ರಕೃತಿಯಲ್ಲಿ ಒಂದಾಗಿ ಬೆರೆಯುವುದು ಅಷ್ಟು ಸುಲಭವಲ್ಲ. ಬೆರೆತರೆ ಮಾತ್ರ ಈ ಅನುಭಾವದ ಕೊನೆಯ ಘಟ್ಟವಾಗುತ್ತದೆ. ಇಲ್ಲಿ ಪರಿಸರ ಪ್ರಜ್ಞೆ ಅತೀತವಾಗುತ್ತದೆ. ಕಾರಣ ಪರಿಪೂರ್ಣ ತತ್ತ್ವದ ಅನುಭವ ಮೂಡುತ್ತದೆ. ಸಾಮಾನ್ಯವಾಗಿ ವೈಚಾರಿಕ ನಿಲುವಿಗೂ ಧರ್ಮದ ಅಧಿಕಾರಿಗಳಿಗೂ ನಡುವೆ ಸಂಘರ್ಷ ಯಾವಾಗಲೂ ಇದ್ದೇ ಇರುತ್ತದೆ. ಈ ಹಿನ್ನೆಲೆಯನ್ನು ಗಮನಿಸಿದಾಗ ಪರಿಸರ ಕಥನಕಾರರ ನಿಸರ್ಗಾನುಭವ ಬಹುತಾತ್ಮಿಕ ನಿಲುವುಗಳು ಜಾಗತಿಕ ಅನುಭಾವದ ನಿಲುವುಗಳಿಗೆ ಅನುಗುಣವಾಗಿರುತ್ತದೆ.

ಈ ನಿಸರ್ಗಾನುಭವ ಕೊನೆಯ ಘಟ್ಟವಾದ ಶಾಂತಿಯನ್ನು ಅಪೂರ್ವ ಪ್ರೀತಿಯ ಸಂಬಂಧವಾಗಿ ಮಾರ್ಪಾಟುಗೊಳ್ಳುವುದೂ ಕೂಡ ಒಂದು ಮುಖ್ಯ ಅಂಗವಾಗುತ್ತದೆ. ಇಲ್ಲಿ

ಶಾಂತಿ ನಿಸರ್ಗದ ಒಂದು ಅವಿಭಾಜ್ಯ ಅಂಗವಾಗಿರುತ್ತದೆ. ಈ ನಿಸರ್ಗದ ಶಾಂತಿಯ ಅನುಭವವನ್ನು ಕಂಡುಕೊಳ್ಳಬೇಕಾದರೆ ಅದಲ್ಲಿಯೆ ಮುಳುಗಬೇಕು.

ಕವಿಯ ಭಾವ ವೈಯಕ್ತಿಕತೆಯಿಂದ ರೂಪಿತವಾಗಿರುವುದರಿಂದ ಸಾರ್ವಜನಿಕ–ವೆನ್ನಿಸುವಂಥ ತತ್ತ್ವಗಳಿಗೆ ತಕ್ಕಂತೆ ತನ್ನತನದ ಮುದ್ರೆಯನ್ನು ಪಡೆದುಕೊಳ್ಳುತ್ತದೆ. ಈ ರೀತಿಯ ವೈಚಾರಿಕತೆಯಿಂದ ಕವಿಯ ಅನುಭವಕ್ಕೆ ಒಂದು ಅತಿಶಯವಾದ ಅರ್ಥ ಹಾಗೂ ಮೌಲ್ಯ ಪ್ರಾಪ್ತವಾಗುತ್ತದೆ. ಇದು ಯವುದೇ ಕ್ಷೇತ್ರಕ್ಕೆ ಸೇರಿರಲಿ ಒಟ್ಟಿನಲ್ಲಿ ಕವಿಯ ಅನುಭವದೊಂದಿಗೆ ಸಾವಯವ ಸಂಬಂಧವನ್ನು ಹೊಂದಿ ಪದ್ಯ ರೂಪದಲ್ಲಿ ಅಭಿವ್ಯಕ್ತವಾಗಿದ್ದರೆ ಈ ಅನುಭವದ ದಿಶೆಯಿಂದ ಸಾಧಾರಾಣತ್ವವನ್ನು ನೀಗಿಕೊಂಡು ಅದರ ಅರ್ಥವ್ಯಕ್ತಿಯ ಪೋಷಕವಾಗಿ ಬರುತ್ತದೆ. ಆದರೆ ಗದ್ಯದಲ್ಲಿ ವ್ಯಕ್ತವಾಗುವ ವೈಚಾರಿಕತೆ ವೈಯಕ್ತಿಕವಾಗಿಯೂ ಇರಬೇಕಿಲ್ಲ. ಆದರೆ ಇಲ್ಲಿ ವಿಚಾರದ ವಿಶದೀಕರಣವಾಗಲಿ, ಹಂತಹಂತವಾದ ತಾತ್ತ್ವಿಕ ಸಮರ್ಥನೆಯಾಗಲಿ ದೀರ್ಘವಾಗಿ ಬರದೆ ಸಾಂಕೇತಿಕವಾಗಿ ಧ್ವನಿತವಾಗುವುದನ್ನು ಕಾಣಬಹುದು. ಈ ಭಾಗದಲ್ಲಿ ಕವಿಯ ವೈಯಕ್ತಿಕತೆಯ ಭಾವದಿಂದ ರೂಪಿತವಾಗಿದ್ದರೂ ತನ್ನತನದ ಮುದ್ರೆಯಿಂದ ಸಾರ್ವಜನಿಕವೆನಿಸುವಂಥ ಮುದ್ರೆಯನ್ನು ಪಡೆದು ವೈಚಾರಿಕ ಅನುಭವವನ್ನು ನೀಡುತ್ತವೆ. ಈ ರೀತಿಯಾಗಿ ಪರಿಸರ ಕಥನಗಳಲ್ಲಿ ಕಥೆಗೆ ಪೋಷಕವಾಗಿ ಅರ್ಥವತ್ತಾಗಿ ಬರುವಂತೆ ಬಳಸಿರುವುದರಿಂದ ಅದು ವೈಚಾರಿಕತೆ–ಯಿಂದ ವಂಚಿತವಾಗುವುದಿಲ್ಲ.

### ಪರಿಸರ ಕಥನದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಬೆಳವಣಿಗೆ

ಚಂದ್ರಶೇಖರ ನಂಗಲಿಯವರ 'ಕಾಡು ಮತ್ತು ತೋಪು'ನಲ್ಲಿ ಈ ಯುಗವೇ ವಿಜ್ಞಾನ ತಂತ್ರಜ್ಞಾನಗಳ ಕಾಲಘಟ್ಟ ಇದಿಲ್ಲದೇ ದೇಶ ಅಭಿವೃದ್ಧಿಶೂನ್ಯ ಅಂಧಕಾರವುಳ್ಳ ರಾಷ್ಟ್ರವಾಗಿರುತ್ತದೆ. ಯಾವುದೇ ದೇಶಕ್ಕೂ ವಿಜ್ಞಾನ ತಂತ್ರಜ್ಞಾನ ಮತ್ತು ಅಭಿವೃದ್ಧಿಗಳು ಒಂದನ್ನು ಬಿಟ್ಟು ಒಂದಿಲ್ಲದಾಗಿದೆ. ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಇಂದು ಯಾವುದೇ ವಿಷಯ, ವಸ್ತು, ಕ್ರಿಯೆ ಸಂದರ್ಭಗಳನ್ನು ವಿಜ್ಞಾನ ತಂತ್ರಜ್ಞಾನಗಳ ಸ್ಪರ್ಶವಿಲ್ಲದೆ ಸೃಜನಶೀಲ ಕ್ರಿಯೆ ರೂಪುಗೊಳ್ಳುವುದಿಲ್ಲ. ಆದ್ದರಿಂದ ಸರ್ವವೂ ವಿಜಾನಮಯವಾಗಿದ್ದು ಜಗತ್ತೇ ವಿಜ್ಞಾನ ಕೇಂದ್ರವಾಗಿದೆ. ಇದರ ಅಸ್ತಿತ್ವದ ಮೂಲ ಪ್ರಕೃತಿಯೇ ಆಗಿದ್ದು, ಈ ಪ್ರಕೃತಿಯನ್ನೇ ವಿಜ್ಞಾನ ಆಳುವಂತಾಗಿ ದಾಸ್ಯದಲ್ಲಿಟ್ಟಿದೆ. ಇದಕ್ಕೆ ಮುಖ್ಯ ಕಾರಣ ಮನುಷ್ಯನ ಸ್ವಾರ್ಥಕೇಂದ್ರಿತ ಅಭಿವೃದ್ಧಿ ಈ ವಿಜ್ಞಾನ ತಂತ್ರಜ್ಞಾನಗಳ ಹೆಸರಿನಲ್ಲಿ ವಿಜೃಂಭಿಸುವ ಅಭಿವೃದ್ಧಿ ಯೋಜನೆಗಳು ಜೀವಂತ ಭೂಮಿಗೆ ಮಾರಕವಾಗಿ ಬಿಡುತ್ತದೆ.

ಇದನ್ನು ಮುಂಚಿತವಾಗಿಯೇ ಗ್ರಹಿಸಿದ್ದ ಗಾಂಧಿ "ಭೂಮಿ ನಮ್ಮೆಲ್ಲರ ಅಗತ್ಯಗಳನ್ನು ಪೂರೈಸುವಷ್ಟು ಸಮೃದ್ಧವಾಗಿದೆ. ಆದರೆ ನಮ್ಮ ದುರಾಸೆಗಳನ್ನು ಈಡೇರಿಸುವ ಸಾಮರ್ಥ್ಯವನ್ನು ಅದು ಹೊಂದಿಲ್ಲ." ಕ್ಷಿಪ್ರ ಲಾಭಗಳಿಸಲು ಭೂಮಿಯ ಸಾರವನ್ನೇ ಹೀರುವುದು ಕೊನೆಗೆ ವಿನಾಶಕಾರಿಯಾದ ಸಂಕುಚಿತ ಧೋರಣೆಯಾಗಿದೆ. ಇದರಿಂದ ಭೂಮಿಯ ಜೀವಧಾರಣ ಶಕ್ತಿಯೇ ಕುಂದಿಹೋಗುತ್ತದೆ. ನಾನೇನೂ ವೈಜ್ಞಾನಿಕ ಪ್ರಗತಿಯ ವಿರೋಧಿಯಲ್ಲ. ಪಾಶ್ಚಾತ್ಯರ ವೈಜ್ಞಾನಿಕ ಪ್ರಗತಿಗೆ ನನ್ನ ಮೆಚ್ಚಿಗೆ ಇದೆ. ಪಾಶ್ಚಾತ್ಯರ ವಿಜ್ಞಾನ ಈ ಸೃಷ್ಟಿಯ ಕನಿಷ್ಠ ಜೀವಿಗಳನ್ನು ಗಣನೆಗೆ ತೆಗೆದುಕೊಳ್ಳದೇ ಇರುವುದರಿಂದ ನನ್ನ ಮೆಚ್ಚಿಗೆಯಲ್ಲಿ ಮಿತಿಯಿದೆ. ಭವಿಷ್ಯದ ಮಾನದಂಡದಲ್ಲಿ ಕೇವಲ ಮನುಷ್ಯ ಕುಲವಷ್ಟೇ ಅಲ್ಲದೇ ಸಮಸ್ತ ಜೀವರಾಶಿಯೂ ಒಳಗೊಳ್ಳುತ್ತದೆ ಎಂಬುವುದು ಅವರ ದೃಷ್ಟಿಕೋನವಾಗಿದೆ.

ಬೆಳವಣಿಗೆಯ ಹೆಸರಿನಲ್ಲಿಂದು ನಡೆದಿರುವ ತಂತ್ರಜ್ಞಾನಿಕ ಆಕ್ರಮಣ ನಿಜವಾಗಿಯೂ ಯಾವುದು ಪ್ರಗತಿಯೇ ಅಂಥ ಮೌಲಿಕ ಅಂಶವನ್ನೇ ಮುಚ್ಚಿ ಹಾಕಿದೆ. ಈ ತಾಂತ್ರಿಕೋದ್ರೇಕಿತ ಪ್ರಕ್ರಿಯೆಗಳು ಈ ಶತಮಾನವನ್ನೇ ಹದಗೆಡೆಸಿವೆ. ವಿಜ್ಞಾನವು ನೈತಿಕತೆಯನ್ನು ಕಳೆದುಕೊಂಡರೆ ಎದುರಿಸುವ ಅಧಃಪತನ ಇದು. ಇಂದು ಆಗುತ್ತಿರುವ ಭೂಮಿಯ ನಾಶ ಫಲವತ್ತತೆಯ ನಾಶ. ಆ ಮೂಲಕ ಬದುಕಿನ ನಾಶ. ನಿಸರ್ಗ ಮತ್ತು ಸಾಮಾಜಿಕ ಸಂಘಟನೆಯಲ್ಲಿ ಒಟ್ಟು ಜಾಗತೀಕ ಪರಿಸರದ ಹಿನ್ನೆಲೆಯಲ್ಲಿ ಮಹತ್ವದ ಪಾತ್ರವಹಿಸುತ್ತಿದೆ. ಎಲ್ಲವೂ ನಿರ್ಲಕ್ಷಿತವಾಗಿರುವಲ್ಲಿ ಆರ್ಥಿಕತೆಗೆ ದೊರೆತಿರುವ ಮಹತ್ವ ಇದು. ಇದರೊಂದಿಗೆ ರಾಜಕೀಯವೂ ಬೆರೆತು ವಿಕೃತ ಪರಿಣಾಮಗಳು ಬರುತ್ತಿವೆ. ಬಹುರಾಷ್ಟ್ರೀಯ ಕಂಪನಿಗಳ ಪ್ರಭುತ್ವ ಇಂಥದ್ದರಲ್ಲೊಂದಾಗಿದೆ.

ಮೂಲತಃ ವಿಜ್ಞಾನ ಮತ್ತು ತಂತ್ರಜ್ಞಾನಗಳೆರಡೂ ತಮ್ಮಿಂದಾಗುವ ಮುಂದಿನ ಪರಿಣಾಮವನ್ನು ಮತ್ತು ತಮ್ಮೊಳಗಿನ ಸತ್ಯವನ್ನು ಬಚ್ಚಿಡುವಲ್ಲಿ ಸಹಭಾಗಿಗಳಾಗಿ ಸತ್ಯವನ್ನು ಬಿಚ್ಚಿಯೂ ಬಿಚ್ಚದಂತೆ ಮುನ್ನಡೆಯುತ್ತದೆ. ಇದನ್ನರಿತ ವೆಸ್ಪರ್ ಮಾರ್ಕ್ಸ್ ವಿಜ್ಞಾನವನ್ನು ಕುರಿತು ಹೀಗೆನ್ನುತ್ತಾನೆ. "ವಿಜ್ಞಾನಕ್ಕಿರುವ ಒಂದೇ ಒಂದು ಅಸಭ್ಯ ವರ್ತನೆಯೆಂದರೆ, "ಸತ್ಯವನ್ನು ಬಚ್ಚಿಡುವುದು".[೧೩]

ಈ ವಿಜ್ಞಾನ ತಂತ್ರಜ್ಞಾನದ ಪ್ರಭಾವದಿಂದ ಏಕಸ್ವಾಮ್ಯ ಬೀಜ, ಗೊಬ್ಬರ ಕೀಟನಾಶಕಗಳು ಬಂದು ಇವುಗಳಿಂದ ಪ್ರಕೃತಿಯ ಲೆಕ್ಕವಿಲ್ಲದಷ್ಟು ಜೀವ ಸಂಕುಲಗಳು ಕಣ್ಮರೆಯಾಗುತ್ತಿವೆ. ಡಾಲರ್ ದೇಶಗಳು ನಿಷೇಧಿಸಲ್ಪಟ್ಟ ಡಿ.ಡಿ.ಟಿ. ಬೋರ್ಡೋ ಮಿಶ್ರಣ ಪೈಲಿಥ್ರಾಯಿಡ್ ಮುಂತಾದ ಕೀಟನಾಶಕಗಳನ್ನು ಭಾರತ ಪುರಸ್ಕರಿಸಿ ಹಲವಾರುರಾಜ್ಯಗಳ ಕೃಷಿಗೆ ಬಳಸಲಾಗಿದೆ. ಇವುಗಳನ್ನು ಬಳಸಲ್ಪಟ್ಟವುಗಳಲ್ಲಿ ಕರ್ನಾಟಕವೂ ಒಂದು. ಈ

ಕೀಟನಾಶಗಖಗಳ ಬಳಕೆಯ ಪರಿಣಾಮವಾಗಿ ಹಲವಾರು ಪ್ರಾಣಿ, ಪಕ್ಷಿ, ಕೀಟ ಸಸ್ಯಗಳು ಕಣ್ಮರೆಯಾಗುತ್ತಿದ್ದು, ಇವುಗಳಿಂದ ಮನುಷ್ಯನಿಗೂ ಅಪಾಯ ಕಟ್ಟಿಟ್ಟ ಬುತ್ತಿ. ಇದರ ಸುಳಿವು ಸಿಕ್ಕೊಡನೆ ಮತ್ತೊಂದು ಸಂಶೋಧನೆಯನ್ನು ವಿಜ್ಞಾನ ಕೈಗೆತ್ತಿಕೊಂಡು ಕಂಡು ಹಿಡಿದ ಕೀಟನಾಶಕಗಳಿಂದ ಹಣ್ಣಡಿಕೆ, ಚೇಳು, ಮಿಂಚುಹುಳು, ಸಣ್ಣಿರುವೆ ಮುಂತಾದವು ನಾಶವಾದವು. ಇದನ್ನು ಕುರಿತು ನಾಗೇಶ್ ಹೆಗಡೆ ಅವರು ಹೀಗೆ ಪ್ರಸ್ತಾಪಿಸುತ್ತಾರೆ.

ಮನುಷ್ಯನಿಗೆ ನೇರ ಅಪಾಯವಿಲ್ಲದ ನೂರಾರು ಕೀಟನಾಶಕ ಕ್ರಿಮಿನಾಶಕಗಳೂ ಕಳೆದ ಎರಡು ದಶಕಗಳಿಂದ ನಮ್ಮಲ್ಲಿ ಬಳಕೆಯಲ್ಲಿವೆ. ಈ ವಿಷಯುಕ್ತ ಪದಾರ್ಥಗಳು ಕೀಟನಾಶಕಗಳನ್ನಷ್ಟೇ ಕೊಳ್ಳುವುದಿಲ್ಲ. ಬತ್ತದ ಗದ್ದೆಗಳಲ್ಲಿ ಹಾವು, ಏಡಿ, ಮೀನು ಎರೆಹುಳುಗಳನ್ನು ಕೊಲ್ಲುತ್ತೇವೆ. ಜೇಡ, ಜೇನುನೊಣ ಹಾಗೂ ರೈತನ ಮಿತ್ರ ಎರೆಹುಳುವನ್ನು ಕೊಲ್ಲುತ್ತಿವೆ.

ನಮ್ಮ ಪೂರ್ವಜರು ಹೆಸರನ್ನೇ ಕೇಳಿರದ ಮಿದುಳು ಜ್ವರ, ಕ್ಷಯಾ ಮಲೇರಿಯಾ ಕ್ಯಾನ್ಸರ್, ಏಡ್ಸ್, ಅಸ್ತಮಾಗಳಂಥ ಹಳೇರೋಗಗಳು ನಮ್ಮ ಬೆಂಬಿಟ್ಟಲ್ಲಿ ಈ ಹೊಸ ರೋಗರುಜಿನಗಳು ಎಲ್ಲಿಂದ ಬರುತ್ತಿವೆ. ಈ ವೈರಸ್‌ಗಳಿಗೆ ಚೈತನ್ಯ ಸಿಗುವಂತೆ ಜೀವಜಾಲದ ಯಾವ ಕೊಂಡಿ ಏರುಪೇರಾಗಿದೆ ಎಂಬುದನ್ನು ಅರಿತ ಹೊರತೂ ಹೊಸ ಚುಚ್ಚುಮದ್ದಿಗಾಗಿ ಶೋಧಿಸಿ ಹೊರಡುವುದು ವಿಫಲ ಯತ್ನವಾದೀತು.

ನಾಗೇಶ್ ಹೆಗಡೆಯವರ 'ಇರುವುದೊಂದೇ ಭೂಮಿ'ಯಲ್ಲಿ ಮಾನವನ ಈ ಅಭಿವೃದ್ಧಿ ಸಾಧನೆಗಳಾದ "ವಿಜ್ಞಾನ ತಂತ್ರಜ್ಞಾನ ಮತ್ತು ಕೈಗಾರಿಕೀಕರಣದ ಬೆಳವಣಿಗೆಯು ಮಾನವನ ಅಗತ್ಯಕ್ಕಾಗಿ ನಿಸರ್ಗವನ್ನು ನಾಶಮಾಡುತ್ತಿದೆ. ಅದು ಪ್ರಕೃತಿಯನ್ನು ಅಪ್ರಕೃತೀಕರಿಸುತ್ತಿದೆ. ನದಿಗಳನ್ನು ರಾಸಾಯನಿಕ ತ್ಯಾಜ್ಯಗಳ ವಾಹವಾಗಿಸುತ್ತಿದೆ. ಆಮ್ಲ ಮಳೆಯಿಂದ ಕಾಡುಗಳು ಸಾಯುತ್ತಿವೆ. ಬಂಡವಾಳಶಾಹಿ ಅಭಿವೃದ್ಧಿಯು ಕೇವಲ ನಿಸರ್ಗವನ್ನಲ್ಲ ಜೊತೆಗೆ ನಿಸರ್ಗಕ್ಕೆ ಸಂಬಂಧಿಸಿದ ನಮ್ಮ ಅಗತ್ಯಗಳನ್ನು ನಾಶಮಾಡುತ್ತಿವೆ".

ಗಿಡಮರಗಳೇ ಇಲ್ಲದಿದ್ದ ಮೇಲೆ ಮನುಷ್ಯರ ಜೀವನ ವಿಕಾಸವಾಗುವುದುಂಟೇ? ಇಲ್ಲಿ ಈ ಹಿಂದೆ ಪ್ರಸ್ತಾಪಿಸಿರುವಂತೆ ಹಲವಾರು ಕಾರ್ಖಾನೆಗಳಿಗೆ ತೇಗ, ಹೊನ್ನೆ, ಬೀಟೆ, ಶ್ರೀಗಂಧ, ಬಿದಿರು ಮುಂತಾದ ಬೆಲೆಬಾಳುವ ಮರಗಳ ಸಸ್ಯ ಸಂಪತ್ತನ್ನೆಲ್ಲ ಕಡಿದು ಸಾಗಿಸಿ ಅರಣ್ಯವೇ ಬರಿದಾಗುತ್ತಿದೆ. ಇಲ್ಲಿಯ ಸಸ್ಯ ವಿಧಿಯಲ್ಲಿ ಮುಖ್ಯವಾಗಿ ಬಹುಪಯೋಗಿ ಬಿದಿರನ್ನು ಹೆಚ್ಚು ಗಮನಿಸುವುದಾದರೆ ಇದು ಜನಜೀವನದಲ್ಲಿ ಬಳಕೆಯಾಗುವ ನಾನಾ ಉಪಯೋಗಗಳನ್ನು ಹೊರತುಪಡಿಸಿ ಇವತ್ತಿನ ಯಂತ್ರಯುಗ ಈ ಮರವನ್ನು ಬಳಸಿಕೊಂಡ ಪರಿಯನ್ನು ನೋಡಿದರೆ ವಿಷಾದವಾಗುತ್ತದೆ.[೧೪]

ಭೂಪಾಲ್‌ನಲ್ಲಿ ೨೦ ಅಡಿ ಉದ್ದದ ಎರಡು ವಿಷಾನಿಲ ಟ್ಯಾಂಕು ಸೋರಿದಾಗ ೨,೦೦,೦೦೦ ಮಂದಿಗೆ ಬದುಕು ಮಾರಕವಾಯಿತು. ಅದರ ಶರೀರಕ್ಕೆ ಸೇರಿದ್ದ ವಿಷವನ್ನು ಇಳಿಸುವಲ್ಲಿ ಇಡೀ ರಾಜ್ಯದ ವೈದ್ಯಕೀಯ ವ್ಯವಸ್ಥೆಯೇ ಸೋತು ಕೈಚೆಲ್ಲಬೇಕಾಯಿತು. ಭೂಮಿಯ ಇನ್ನೊಂದು ಮಗ್ಗುಲಿನಲ್ಲಿ ಕಾರ್ಬೈಯಿಡ್ ಕಾರ್ಖಾನೆಗಳ ಎದುರು ಪೋಲೀಸ್ ಅಶ್ರುವಾಯುವಿಗೆ ಜನಸಾಮಾನ್ಯರು ಕಣ್ಣೀರಿಡಬೇಕಾಯಿತು.

ಈ ರೀತಿ ವಿಜ್ಞಾನ ಮತ್ತು ತಂತ್ರಜ್ಞಾನಗಳಿಂದಾಗುವ ಅನಾಹುತಗಳು ಸಾವಿರಾರು. ಇಂತಹ ಆಕಸ್ಮಿಕ ಘಟನೆಗಳಿಂದಾಗುವ ದುರಂತಕ್ಕಿಂತ ಭೀಕರವಾದುದ್ದು. ಉದ್ದೇಶಪೂರ್ವಕವಾಗಿ ನಡೆಯುವ ವ್ಯಕ್ತಿವ್ಯಕ್ತಿಗಳ, ದೇಶದೇಶಗಳ ನಡುವಿನ ದ್ವೇಷದ ಜೀವಸಮತ, ಇದು ನೆನ್ನೆ ಮೊನ್ನೆಯದಲ್ಲ. ವೇದಪೂರ್ವದಿಂದಲೂ ರೂಢಿಯಲ್ಲಿದೆ. ಅಂದರೆ ರಾಮಾಯಣ ಮಹಾಭಾರತಗಳ ಕಾಲದಿಂದಲೂ ಯುದ್ಧಕ್ಕೆ ಕತ್ತಿ, ಗುರಾಣಿ, ಗುಂಡು, ಭರ್ಜಿ ಮುಂತಾದ ಆಯುಧಗಳನ್ನು ಬಳಸಲಾಗುತ್ತಿತ್ತು. ಆದರೆ ಆಧುನಿಕ ಜಗತ್ತು ವಿಜ್ಞಾನ ತಂತ್ರಜ್ಞಾನಗಳ ಬೆಳವಣಿಗೆಯಿಂದ ಸಿಡಿಮದ್ದು ನಾನಾರೀತಿಯ ಬಾಂಬ್‌ಗಳನ್ನು ಬಳಸುತ್ತಿದ್ದು ಈಗ ಅನುಬಾಂಬ್ ಹೈಡ್ರೋಜನ್ ಬಾಂಬ್‌ಗಳಿಂದ ಸಜ್ಜಾಗಿವೆ. ಈ ಯುಗದ ಸಮರ ಸಾಮರ್ಥ್ಯದ ಬೆಳವಣಿಗೆಯನ್ನು ಉಲ್ಲೇಖಿಸುತ್ತದೆ.

ಆಗಸ್ಟ್ ೬, ೧೯೪೫ರಂದು ಹಿರೋಶಿಮಾ ನಗರದ ಮೇಲೆ ಬಾಂಬ್ ಹಾಕಿದ ನಂತರ ಅಲ್ಲಿಂದ ಇಲ್ಲಿಯವರೆಗೂ ಮಾರಕಶಕ್ತಿಯ ಅಣ್ವಸ್ತ್ರಗಳು ತಯಾರಾಗುತ್ತಿವೆ. ಅಮೇರಿಕ್ವಾ ಜಪಾನಿನ ಹೀರೋಶಿಮಾ ನಾಗಸಾಕಿ ಪಟ್ಟಣಗಳ ಮೇಲೆ ಬಾಂಬ್ ಪ್ರಯೋಗಿಸಿದಂದಿನಿಂದ ಜಗತ್ತೇ ಆ ಮಾರಣಹೋಮಕ್ಕೆ ತತ್ತರಿಸಿತು. ಅಲ್ಲಿಂದ ಹಲವಾರು ದೇಶಗಳು ತಮ್ಮ ರಕ್ಷಣೆಗಾಗಿ ವಿಜ್ಞಾನ ತಂತ್ರಜ್ಞಾನಕ್ಕೆ ಮೊದಲ ಪ್ರಾಶಸ್ತ್ಯನೀಡಿ ಅಣುಸ್ಥಾವರ ಸ್ಥಾಪಿಸಿ ಅಣುಬಾಂಬ್ ತಯಾರಿಸಿ ಪ್ರಯೋಗಕ್ಕೊಳಪಡಿಸಿವೆ. ಹಾಗಾಗಿ ೧೯೪೫ರಿಂದ ಇಲ್ಲಿಯವರೆಗೆ ಜಗತ್ತಿನಲ್ಲಿ ೨೦೫೧ ಅಣ್ವಸ್ತ್ರಗಳ ಪರೀಕ್ಷೆ ನಡೆದಿದೆ. ಪರೀಕ್ಷೆಗಳು ಬಾಹ್ಯಾಕಾಶದಲ್ಲಿ ಮತ್ತು ಸಮುದ್ರದ ತಳದಲ್ಲಿ ನಡೆಸಿದ್ದಾರೆ. ಕೆಲವು ಭೂಗರ್ಭದಲ್ಲಿ ನಡೆದಿವೆ. ಈ ಬೆಳವಣಿಗೆಯಿಂದಾಗಿ ಭೂಮಿ, ಆಕಾಶ, ಸಮುದ್ರದಲ್ಲೆಲ್ಲ ಅಣುವಿಕಿರಣಗಳು ಪ್ರಸಾರವಾಗಿ ಅವುಗಳಿಗೆ ಸಿಕ್ಕ ಪ್ರಕೃತಿಯ ಜೀವಿಗಳೇ ಅವಸಾನವಾಗುತ್ತಿವೆ. ಈ ಎಲ್ಲಾ ಅಪಘಾತಗಳಿಂದ ಲಕ್ಷಾಂತರ ಜನ ಸಾವಿಗೀಡಾಗಿ ಅದರ ಪರಿಣಾಮ ಇನ್ನೂ ಈ ಜೀವ ಜಗತ್ತಿನ ಮೇಲೆ ತಟ್ಟುತ್ತಿದ್ದರೂ ಸರ್ಕಾರ ಜಾಣಗಿವುಡರಾಗಿ ಕುಳಿತಿದೆ. ಇಂತಹ ವಿಜ್ಞಾನ ತಂತ್ರಜ್ಞಾನ ಕಾರ್ಯ ಮುಂದುವರೆದರೆ ಜೀವಜಗತ್ತು ವಿನಾಶದ ಅಂಚನ್ನು ತಲುಪಲು ಯಾವುದೇ ಅನುಮಾನವಿಲ್ಲ.[೧೫]

**ಆಧುನಿಕ ಪರಿಸರ ಕಥನಗಳಲ್ಲಿ ಸಾಮಾಜಿಕಕತೆ**

ಕಾವ್ಯದ ಅಧ್ಯಯನವೊಂದರಲ್ಲಿ ಸಾಪೇಕ್ಷ ಪ್ರಕ್ರಿಯೆ, ಸಹಜವಾದದ್ದೆ. ಯಾಕೆಂದರೆ ಅದು ಬದುಕಿನ ಸಮಸ್ತ ಉತ್ಪತ್ತಿಗಳ ನಡುವೆಯೇ, ಫಲವಾಗಿಯೇ, ಮೊತ್ತವಾಗಿಯೇ ಮೂಡಿದ ಕ್ರಿಯೆಯಾಗಿರುತ್ತದೆ. ಆದ್ದರಿಂದ ಕಾವ್ಯ ಒಳಗೊಳ್ಳುವುದೆಂದರೆ ಇಡೀ ಸಮಾಜವನ್ನೇ ಆ ಸಮಾಜದ ವರ್ತನೆಗಳನ್ನೇ ಗುರುತಿಸಿಕೊಳ್ಳುವ ಕಾಯಕವಾಗುತ್ತದೆ. ಅಂದರೆ ಸಾಹಿತ್ಯವೊಂದನ್ನೇ ಶುದ್ಧಾಂಗವಾಗಿ ಕಂಡುಕೊಳ್ಳುವುದಾಗಲಿ, ಕೊಂಡಾಡುವುದಾಗಲಿ ಸಾಧುವಾದುದ್ದಲ್ಲ ಎಂಬುದನ್ನು ಈಗಾಗಲೇ ಗುರುತಿಸಲಾಗಿದೆ. ಅದೊಂದು ಕಲಾ ಮಾಧ್ಯಮ ಎಂಬುದು ನಿಜ. ಹಾಗಂತ ಅದು ಅಲೌಕಿಕವಾದದ್ದಲ್ಲ. ಈ ನೆಲೆಯಲ್ಲಿ ಸಾಹಿತ್ಯವನ್ನು ಅನುಸಂಧಾನಿಸುವುದು ಎಂದರೆ ಅದರ ಮುಖೇನ ಒಟ್ಟು ಸಾಮಾಜಿಕ ಸ್ತರಗಳನ್ನು ಮುಟ್ಟುವುದು ಎಂದೇ ಅರ್ಥ. ಹೀಗೆ ಇಡೀ ಮಾನವ ಚಟುವಟಿಕೆ ಹಾಗೂ ಮನೋಧರ್ಮಗಳ ಪರಿಚಯ ಸಹಜವಾಗಿ ದಾಖಲಾಗಿಬಿಡುತ್ತದೆ. ಯಾವುದೇ ಸಾಮಾಜಿಕ ಸಂದರ್ಭದಿಂದ ದೂರ ಇದ್ದಾಗ ಕೃತಿಗೆ ಅರ್ಥವಿರುವುದಿಲ್ಲ. ಅಂದರೆ ಕಲೆಯ ಗ್ರಹಿಕೆಯ ನೆಲೆಗೂ ಚಾರಿತ್ರಿಕ, ಸಾಂಸ್ಕೃತಿಕ ಗ್ರಹಿಕೆಯ ನೆಲೆಗೂ ಆಂತರಿಕ ಸಂಬಂಧ ಇದ್ದೇ ಇರುತ್ತದೆ.

ಆಧುನಿಕ ಕನ್ನಡ ಸಾಹಿತ್ಯ ವಿಭಿನ್ನ ಪ್ರೇರಣೆ, ಸಂಘರ್ಷಗಳನ್ನು ಎದುರಿಸುತ್ತಲೇ ಬೆಳೆದುಬಂದಿದೆ. ಕೆಲವು ಸಲ ಸ್ವಪ್ರೇರಣೆಯ ಸೆಳೆತಕ್ಕೊಳಗಾದರೆ ಮತ್ತೆ ಕೆಲವು ಬಾರಿ ಒತ್ತಡಕ್ಕೊಳಗಾಗಿ ಆಹ್ವಾನಿಸಿಕೊಂಡಿದೆ. ಹೀಗೆ ಆಂತರಿಕ ಮತ್ತು ಬಾಹ್ಯ ಒತ್ತಾಸೆ ಉದ್ದಕ್ಕೂ ಒಂದಲ ಒಂದು ರೀತಿಯಲ್ಲಿ ಸಾಹಿತ್ಯದಲ್ಲಿ ಅಂತರ್ಗತವಾಗಿ ನೇಯ್ದುಕೊಂಡಿದೆ. ಇದು ಆಧುನಿಕ ಕಾವ್ಯ ಚರಿತ್ರೆಗಷ್ಟೇ ಸೀಮಿತವಾದದ್ದಲ್ಲ ಒಟ್ಟಾರೆ ಸಾಹಿತ್ಯಕ್ಕೂ ಅನ್ವಯಿಸುತ್ತದೆ. ಈ ಪ್ರಕ್ರಿಯೆ ವಿಧಾನವೂ ಹಿಂದೆ ನಿಯಮಿತವೂ ಆಗಿತ್ತು. ದೇಸೀಯತೆಯ ಈ ಸಂಘರ್ಷ ಆಧುನಿಕ ಕಾಲದಲ್ಲಿ ಹೆಚ್ಚು ವ್ಯಾಪಕ ವಿನ್ಯಾಸದಲ್ಲಿ ಮತ್ತು ವಸಾಹತುಶಾಹಿಯ ಆಕ್ರಮಣದಲ್ಲಿ ವಿಸ್ತೃತಗೊಂಡಿದೆ. ಈ ಪ್ರಕ್ರಿಯೆಯ ಗತಿ ತೀವ್ರವಾಗಿ ನಡೆದಿರುವುದನ್ನು ಆಧುನಿಕ ಕನ್ನಡ ಸಾಹಿತ್ಯದ ಮುಖೇನ ಕಂಡುಕೊಳ್ಳಬೇಕಾಗಿದೆ.

ವಸಾಹತುಶಾಹಿಯನ್ನು ನಮ್ಮ ಕನ್ನಡ ಸಾಹಿತಿಗಳು ಎರಡು ರೀತಿಯಲ್ಲಿ ಗ್ರಹಿಸಿ-ಕೊಂಡಿದ್ದಾರೆ. ಅನ್ಯರ ಆಳ್ವಿಕೆಗೆ ಒಳಗಾದ ಯಾವುದೇ ಒಂದು ಸಂಸ್ಕೃತಿ ಸಹಜವಾಗಿಯೇ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಡುತ್ತಲೇ ಕೆಲವಷ್ಟನ್ನು ಕಳೆದುಕೊಂಡು ಹೊರಗಿನದನ್ನು ಆಮದು ಮಾಡಿಕೊಳ್ಳುತ್ತದೆ. ನಮ್ಮಲ್ಲಿ ಆದದ್ದು ಇದೆ. ಇಂಗ್ಲಿಷ್ ಶಿಕ್ಷಣದ ಫಲವಾಗಿಯೇ ಇಲ್ಲಿ ಅರಿವಿನ ವಿಸ್ತಾರವಾಗಿದೆ. ಅನ್ಯಜ್ಞಾನಗಳ, ಶಿಸ್ತುಗಳ ಪರಿಚಯ ಆಧುನೀಕರಣಕ್ಕೆ ಪ್ರೇರಕವಾಗಿದೆ. ಅದರೊಟ್ಟಿಗೆ ಸ್ವಾಭಿಮಾನ ಹಾಗೂ ಸ್ವಂತಿಕೆ ಎಚ್ಚರವೂ

ಒಡಮೂಡಿದೆ. ವಸಾಹತುಶಾಹಿಯನ್ನು ಧನಾತ್ಮಕವಾಗಿ ಹಾಗೂ ಋಣಾತ್ಮಕವಾಗಿ ನಮ್ಮ ನವೋದಯ ಸ್ವೀಕರಿಸಿದೆ.

ವಸಾಹತು ಹುಟ್ಟುಹಾಕಿದ ಹೊಸ ಸಮಸ್ಯೆಗಳನ್ನು ಹೀಗೆ ಕ್ರೋಢೀಕರಿಸಬಹುದು.

೧) ಈ ಸಾಂಪ್ರದಾಯಿಕ ಮೌಲ್ಯಗಳಲ್ಲಿ ಉಂಟಾದ ತಲ್ಲಣ ಹಾಗೂ ಪರಿವರ್ತನೆ

೨) ದೇಸೀಯ ಸಂಸ್ಕೃತಿಯ ವಿನಾಶದ ಭಯ

೩) ಕೈಗಾರೀಕರಣದ ಮೂಲಕ ಉತ್ಪನ್ನ ವ್ಯವಸ್ಥೆಯಲ್ಲಾದ ಬದಲಾವಣೆ. ಇದರಿಂದಾಗಿ ನಗರೀಕರಣದ ಬೆಳವಣಿಗೆ.

೪) ಕುಶಲ ಕಲಾವಿದರು ಕೆಲಸ ಕಳೆದುಕೊಂಡರು

೫) ನಿರುದ್ಯೋಗದ ಸಮಸ್ಯೆ

ಈ ಅನ್ಯ ಸಂಸ್ಕೃತಿಗೆ ಗ್ರಾಮೀಣ ನೆಲೆಯಲ್ಲಿಯೂ ಪ್ರಬಲ ವಿರೋಧ ವ್ಯಕ್ತವಾಗಲು ಕಾರಣ ಆಧ್ಯಾತ್ಮ ಹಾಗೂ ದೇಸೀಯ ಅವಸ್ಥೆಗೆ ಬಂದೊದಗಿದ ಧಕ್ಕೆಯೇ ಆಗಿದೆ. ತಮ್ಮ ಸುತ್ತಣ ಸಮಾಜದ, ಸಮುದಾಯದ ಸಂದರ್ಭಗಳಲ್ಲಿ ನಾಶಗೊಳ್ಳುತ್ತಿದ್ದ ಮನುಷ್ಯ ಸಂಬಂಧಗಳನ್ನು ಕುರಿತು ಕಳೆದ ಶತಮಾನದ ಮಧ್ಯಭಾಗದಲ್ಲಿ ಕವಿಗಳೂ ಕನ್ನಡದಲ್ಲಿ ಪ್ರಾದೇಶಿಕ ಸಂಸ್ಕೃತಿಕ ಆವರಣವನ್ನು ಜಾಗೃತಗೊಳಿಸಿದರು.[೧೬]

ಚಂದ್ರಶೇಖರ ನಂಗಲಿಯವರ 'ಕಾಡು ಮತ್ತು ತೋಪು'ನಲ್ಲಿ ಉತ್ಪಾದನಾ ವ್ಯವಸ್ಥೆಯಲ್ಲಿ ಆಧುನಿಕತೆ ಪ್ರವೇಶಿಸಿದ್ದರಿಂದ ಗ್ರಾಮೀಣ ಕುಶಲ ಕಸುಬುದಾರರು ತಮ್ಮ ಕೆಲಸವನ್ನು ಕಳೆದುಕೊಳ್ಳುವಂತಾಯಿತು. ಅಂದರೆ ಮನುಷ್ಯರ ಬದಲು ಯಂತ್ರ ಉದ್ದಿಮೆಪತಿಗಳೂ ಯಜಮಾನ್ಯವನ್ನು ನಿರ್ವಹಿಸತೊಡಗಿದರು. ಪಟ್ಟಣಗಳಲ್ಲಿ ಈ ಎಲ್ಲ ಉದ್ದಿಮೆಗಳು ಕೇಂದ್ರೀಕರಿಸಲ್ಪಟ್ಟಿದ್ದರಿಂದ ನಗರಗಳು ಬೆಳೆದವು. ಅದರಿಂದಾಗಿ ನಗರೀಕರಣದ ಪ್ರಕ್ರಿಯೆ ಎಲ್ಲೆಡೆ ಹಬ್ಬಿತು. ಹಳ್ಳಿಗಾಡಿನ ಜನ ಉದ್ಯೋಗವನ್ನರಸಿ ಪಟ್ಟಣಗಳಿಗೆ ವಲಸೆ ಬರತೊಡಗಿದರು. ಮತ್ತದು ಜನರನ್ನು ಆಕರ್ಷಿಸುವಲ್ಲಿ ಯಶಸ್ವಿಯಾದ್ದರಿಂದ ಕುಟುಂಬಗಳಲ್ಲಿ ಬಿರುಕು ಉಂಟಾದವು. ಕೌಟುಂಬಿಕ ನೆಮ್ಮದಿ ಶಿಥಿಲವಾದದ್ದು ಈ ಹೊತ್ತಿನಲ್ಲಿಯೇ. ಬ್ರಿಟಿಷರ ಆರ್ಥಿಕ ಹಿತಾಸಕ್ತಿಗಳಿಂದ ಬೆಳೆಸಲ್ಪಟ್ಟ ಕೈಗಾರಿಕೋದ್ಯಮಗಳು ಆವರೆಗೆ ಗ್ರಾಮೀಣ ಉದ್ಯಮಗಳಲ್ಲಿ ಕರಕುಶಲ ವಸ್ತುಗಳ ಉತ್ಪಾದನೆಯಲ್ಲೂ ಸ್ವಲ್ಪಮಟ್ಟಿಗೆ ಸ್ವಾವಲಂಬನೆ ಸಾಧಿಸಿದ್ದ ಮಹಿಳಾ ಕಾರ್ಮಿಕರನ್ನು ಆ ಅಲ್ಪಸ್ವಲ್ಪ ಸ್ವಾವಲಂಬನೆಯ ನೆಲೆಯಿಂದ ಪಲ್ಲಟಗೊಳಿಸಿದವು. ಗೃಹಕೈಗಾರಿಕಾ ಉತ್ಪನ್ನಗಳಿಗೆ ಬೇಡಿಕೆ ಇಲ್ಲವಾಗಿ ಅವು ಕುಸಿದವು. ಹೀಗಾಗಿ ಹಳ್ಳಿಗಳನ್ನು ಬಿಟ್ಟು ಪಟ್ಟಣದ ಕೈಗಾರಿಕಾ ವಲಯದ ಕಡೆಗೆ ಬಂದು ಸೇರತೊಡಗಿದರು. ಈ ಎಲ್ಲ ನೋವುಗಳನ್ನು ಹಿಡಿದಿಡಲು ಆಧುನಿಕ ಸಾಹಿತ್ಯ ಹಿಂದೆ ಬೀಳಲಿಲ್ಲ. ಮನುಷ್ಯ ಮತ್ತು

ಸಮಾಜದ ನಡುವಿನ ಏಕೀಕೃತ ಸಾಮರಸ್ಯವನ್ನು ತಮ್ಮ ಪ್ರಮುಖ ತಾತ್ವಿಕ ಸ್ಥಿತಿಯನ್ನಾಗಿ ಪ್ರತಿಪಾದಿಸಿದರು.

ವಸಾಹತುಶಾಹಿಯ ಸನ್ನಿವೇಶದಲ್ಲಿ ವೈವಿಧ್ಯತೆಯನ್ನು ಅಳಿಸಿ ಯಾವುದೇ ಒಂದು ಮಾದರಿಯನ್ನು ನೆಚ್ಚಿಕೊಳ್ಳುವ ರೀತಿ ಬೆಳೆಯಿತು. ಈ ಸಮಯದಲ್ಲಿ ಅಮೂರ್ತವನ್ನು ಮೂರ್ತಗೊಳಿಸುವ ಪ್ರವೃತ್ತಿಯು ಬೆಳಕಿಗೆ ಬಂದಿತು. ಇಲ್ಲಿಯೂ ಏಕರೀತಿಯ ಬೆಳವಣಿಗೆ-ಯನ್ನು ಗಮನಿಸಬಹುದು. ವಸಾಹತುಶಾಹಿಗೆ ಎದುರಾಗಿ ಬಂದ ಮಾನವತಾವಾದ ಎಂಬ ವೈಚಾರಿಕ ಆಕೃತಿಯು ಪರಿಸರ ಕಥನಕಾರರ ಒಲವಿನ ನಿಲುವಿಗೆ ಪ್ರೇರಣೆ ನೀಡಬಹುದು. ಪರಿಸರ ಕಥನಗಳಲ್ಲಿ ಸಾಮಾನ್ಯ ಮನುಷ್ಯರಲ್ಲಿಯೂ ಪ್ರೀತಿಯೆನ್ನುವ ಪರಿಕಲ್ಪನೆಗೆ ಅವಕಾಶವಿದೆಯೆಂದು ತೋರಿಸುವ ಸಮಾಜದಲ್ಲಿ ಜಾಗೃತಿ ಮೂಡುವ ಸಮಯದಲ್ಲಿ ಮಾನವೀಯ ಮೌಲ್ಯಗಳನ್ನು ಸಾರುವ ಹಲವು ಕತೆ-ಕಾದಂಬರಿಗಳ ಮೂಲಕ ಬರೆಯಲು ಪ್ರೇರೇಪಿತರಾಗಿದ್ದಾರೆ. ಕೇವಲ ಕತೆ, ಕಾದಂಬರಿ ಅಷ್ಟೇ ಅಲ್ಲ ಜಾನಪದ ನೀತಿಯಲ್ಲಿ ನಾವು ಕಾಣಬಹುದು.

ಪರಕೀಯ ಆಕ್ರಮಣದಿಂದ ನಮ್ಮ ಸಂಸ್ಕೃತಿಯ ಮುಖ್ಯ ನೆಲೆಗಳು ತೀವ್ರವಾದ ಅಘಾತಕ್ಕೆ ಗುರಿಯಾದದ್ದನ್ನು ಈ ಕಾಲಮಾನದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸಂದರ್ಭಗಳಲ್ಲಿ ಕಾಣುತ್ತೇವೆ. ಹೊಸ ಪರಿಸರ ನಮ್ಮ ಒಟ್ಟು ಸಂದರ್ಭವನ್ನು ಆವರಿಸಿದ್ದರಿಂದ ಮನುಷ್ಯ ಎದುರಿಸಬೇಕಾಗಿ ಬಂದ ಸವಾಲುಗಳು ಕೂಡ ಬಹುಮುಖವಾಗಿದ್ದವು. ಪಾರಂಪರಿಕ ಜೀವನ ವಿಧಾನಕ್ಕೂ ಹೊಸ ಸಂದರ್ಭದಿಂದ ನಿರ್ಮಾಣವಾದ ವಾತಾವರಣಕ್ಕೂ ಘರ್ಷನೆ ಏರ್ಪಡುವುದು ಅನಿವಾರ್ಯವೇ ಆಗಿತ್ತು.

ತನ್ನ ಸುತ್ತಣ ಪರಿಸರ ನಾಶವನ್ನು ಕಂಡು ಮಾನವ ಮರುಗುತ್ತಾನೆ. ಕ್ರೌರ್ಯ ಅನ್ಯಾಯಗಳನ್ನು ಕಂಡು ಕ್ರುದ್ಧನಾಗುತ್ತಾನೆ. ಅವನ ಕರುಳಿನ ಕುದಿತ ಆಕ್ರೋಶ ಇವುಗಳು ಕೂಡ ಅವನಿಂದ ಉತ್ತಮವಾದ ಸಾಹಿತ್ಯವನ್ನು ಮೂಡಿಸುವ ಪ್ರೇರಕ ಶಕ್ತಿಗಳಾಗುತ್ತವೆ. ಕನ್ನಡ ನವೋದಯ ಸಾಹಿತ್ಯ ಬೆಳೆದು ಬಂದದ್ದು ಭಾರತ ತನ್ನ ಸ್ವಾತಂತ್ರ್ಯದ ಹೋರಾಟದ ಕ್ಷುಬ್ಧತೆಯ ತೀವ್ರಸ್ಥಿತಿಯಲ್ಲಿ ಇದ್ದಾಗ ಎಂಬುದನ್ನು ನೆನಪಿಗೆ ತಂದುಕೊಂಡರೆ ದೇಶದ ಮಹಾಮುಕ್ತಿಗಾಗಿ ಜನರನ್ನು ಪ್ರೇರೇಪಿಸುವ ಅಮೂಲ್ಯ ಹೊಣೆಯನ್ನು ನಮ್ಮ ಲೇಖಕರು ಹೊರಬೇಕಾಗಿ ಬಂದ ಸಂದರ್ಭ ತಿಳಿಯುತ್ತದೆ.[೧೭]

ಕುವೆಂಪು ನಿಸರ್ಗ ಪ್ರೀತಿ ಮತ್ತು ದಾರ್ಶನಿಕತೆಯ ಅದ್ವಿತೀಯ ಕವಿ ಮಾತ್ರವಲ್ಲ. ಸಾಮಾಜಿಕ ಪ್ರಜ್ಞೆಯ ಮಹತ್ವಪೂರ್ಣ ಕವಿಯೂ ಆಗಿದ್ದಾರೆ. ಸಮಾಜವನ್ನು ಸೂಕ್ಷ್ಮವಾಗಿ ಅವಲೋಕಿಸುವುದರಿಂದ ಮಾತ್ರ ಸಾಧ್ಯವಾಗುವ ಲೋಕಾನುಭವ ಶ್ರೀಮಂತಿಕೆ ಅವರ

ಸಾಹಿತ್ಯದ ಮುಖ್ಯ ಗುಣಗಳಲ್ಲಿ ಒಂದಾಗಿ ಎದ್ದುಕಾಣುತ್ತದೆ. ಕುವೆಂಪು ದೃಷ್ಟಿಯಲ್ಲಿ ಸಮಾಜವೆನ್ನುವುದು ಉತ್ತಮ ಕುಲದವರಿಗೂ ಶ್ರೀಮಂತರಿಗೂ ಸೀಮಿತವಾದುದಲ್ಲ. ಬಹುಸಂಖ್ಯೆಯ ಶ್ರೀಸಾಮಾನ್ಯರಿಂದ ಕೂಡಿದ ವಿಸ್ತಾರ ಪ್ರಪಂಚ ಎಲ್ಲ ವರ್ಗ ಎಲ್ಲ ವೃತ್ತಿಗಳ ಜೀವಸಂಕುಲಗಳ ಸಂಕಟಮಯ ಭೀಕರ ಪರಿಸ್ಥಿತಿಯ ಹೃದಯವಿದ್ರಾವಕ ಚಿತ್ರ ಇದು. ಕುವೆಂಪು ಸಾಹಿತ್ಯದಲ್ಲಿ ಕಣ್ಣಿಗೆ ಕಟ್ಟುವಂತೆ ವರ್ಣನೆಗೊಂಡಿದೆ. ವೈಚಾರಿಕ ಬುದ್ಧಿಯನ್ನು ವೈಜ್ಞಾನಿಕ ಮನೋಧರ್ಮವನ್ನು ರೂಡಿಸಲು ಕುವೆಂಪು ಲೇಖನ, ಭಾಷಣ, ಕಾವ್ಯಗಳ ಮುಖೇನ ತಮ್ಮೆಲ್ಲ ಶಕ್ತಿಯನ್ನು ಪ್ರಯೋಗಿಸಿದ್ದಾರೆ. ಸಾಮಾಜಿಕ ಶಾಪಗಳಂತೆ ಕಾಡುತ್ತಿರುವ ಹಲವು ಪಿಡುಗುಗಳನ್ನು ತ್ಯಜಿಸಿ ಶ್ರೇಯಸ್ಸಿಗೆ ಅಗತ್ಯವಾದ ಸುಜ್ಞಾನವನ್ನು ಸಂಪಾದಿಸಿ–ಕೊಳ್ಳುವಂತೆ ಎಚ್ಚರಿಸಿದ್ದಾರೆ.

ಯುಗಗಳು ಕಳೆದಂತೆ ಜೀವಪರಿಸರದಲ್ಲಿ ಪ್ರಾಣಿಪಕ್ಷಿಗಳು ಯಾವ ರೀತಿಯಲ್ಲಿ ವಿನಾಶದ ಅಂಚನ್ನು ತಲುಪುತ್ತವೆ ಎಂದು ತಿಳಿಯಬಹುದು. ಕುವೆಂಪುರವರು ಅರಣ್ಯವನ್ನು ಸುತ್ತುತ್ತಿದ್ದಾಗ ಕಾಡಿನಲ್ಲಿ ವಾಸವಾಗಿದ್ದ ಚರ ಮತ್ತು ಅಚರ ಸಮೂಹಗಳು ನಾಶವಾಗುವುದನ್ನು ನಾವು ಗಮನಿಸಬಹುದು. ಕಾಡುಗಳಿಲ್ಲದೆ ಕಾಡುಪ್ರಾಣಿಗಳಿಲ್ಲದ ಜೀವಪರಿಸರವು ಶ್ಮಶಾನಕ್ಕಿಂತ ಭೀಕರವಾಗಿ ಕಾಣುತ್ತವೆ. ಪರಿಸರದಲ್ಲಿ ಜೀವಿಸುವ ಮಹತ್ವ ಅಥವಾ ದೊಡ್ಡ ದೊಡ್ಡ ಪ್ರಾಣಿಪಕ್ಷಿಗಳು ಕೀಟಗಳು ಕೂಡ ಪರಿಸರ ಸಂಪತ್ತು ಎಂದು ತಿಳಿಸಿದ್ದಾರೆ. ಮಾನವೀಯತೆ ಇಲ್ಲದ ಮನುಷ್ಯನು ಪ್ರಾಣಿಯೊಂದಿಗೆ ವರ್ತಿಸುವ ರೀತಿ ಕ್ರೂರಿಯಂತೆ ಮನುಷ್ಯನು ಪ್ರಾಣಿಗಳನ್ನು ತನ್ನ ಸ್ವಾರ್ಥಕ್ಕಾಗಿ ಬಳಸಿಕೊಂಡು ಅವುಗಳನ್ನು ನಿರ್ದಯೆಯಿಂದ ಕಾಣುವುದು. ಅವುಗಳ ಮೇಲೆ ಸ್ವಲ್ಪವೂ ಕರುಣೆ ಕೃತಜ್ಞತೆ ತೋರಿಸುವುದಿಲ್ಲ ಎಂದು ವ್ಯಸನವಾಗುತ್ತದೆ. ಇಂತಹ ಅಂಶಗಳನ್ನು ಅವರ ಪರಿಸರ ಕಥನದಲ್ಲಿ ಗಮನಿಸಬಹುದು.[೧೮]

ಬಿ.ಜಿ.ಎಲ್.ಸ್ವಾಮಿಯವರ ಹಸುರು ಹೊನ್ನು ಕೃತಿಯಲ್ಲಿ ಸಾಮಾಜಿಕತೆಯನ್ನು ನೋಡುವುದಾದರೆ, ವಿಷಪೂರಿತ ಹಾಲಿನ ಮರಗಳು ಪ್ರಕೃತಿಯಲ್ಲಿವೆ. ಈ ಇಟ್ಟಿ ಅಜ್ಜಿಂಪಟ್ಟಿ ಮರಗಳ ಹಾಲಿನಲ್ಲಿ ವಿಷಪೂರಿತ ರಾಸಾಯನಿಕ ಅಂಶಗಳಿದ್ದರೂ ಆ ಹಾಲು ಮಾನವನ ಆರೋಗ್ಯಕ್ಕೆ ಅನುಕೂಲವಾಗಿದೆ. ಈ ಮರಗಳ ಮೂಲಕ ನಾಟಿ ಔಷಧಿಯ ಮಹತ್ವದ ಸಂಶೋಧನಾತ್ಮಕ ವಿವರಣೆ ಇಲ್ಲಿ ವ್ಯಕ್ತವಾಗಿದೆ. ನಾಟಿ ಔಷಧಿಯ ಬಳಕೆ ತುಂಬ ಪ್ರಾಚೀನವಾದುದು. ಅಂದಿನ ನಾಟಿ ಔಷಧಿಯೇ ಇಂದಿನ ಹೊಸ ಹೊಸ ರಾಸಾಯನಿಕ ಔಷಧಿಗೆ ಅಲೋಪತಿಗೆ ಆಯುರ್ವೇದ ಔಷಧಿಗಳ ತಯಾರಿಕೆಗೆ ಮೂಲವೆನ್ನುವುದರಲ್ಲಿ ಎರಡು ಮಾತಿಲ್ಲ. ಅಂದಿನಿಂದ ಇಂದಿಗೂ ಸಸ್ಯ ಪರಿಸರ ಕೇವಲ ಔಷಧಿಗಾಗಲಿ, ಆಹಾರಕ್ಕಾಗಲಿ ಸೀಮಿತವಾಗಿಲ್ಲ. ಅವು ಬಹು ಉಪಯೋಗಿಯಾಗಿ ಬಳಕೆಯಾಗುತ್ತಿವೆ.

ಇದನ್ನು ಸ್ವಾಮಿಯವರು ಹಸುರು ಹೊನ್ನು ಕೃತಿಯಲ್ಲಿ ಕೊಡುವ ಎಲ್ಲ ಸಸ್ಯ ಪರಿಚಯದಲ್ಲೂ ಔಷಧಿ ಗಿಡಗಳಿಂದ ಮಾನವ ನಾನಾ ರೀತಿಯ ಉಪಯೋಗ ಕಂಡುಕೊಂಡಿರುವ ವಿವರ ನೀಡುತ್ತಾರೆ. ಉಲ್ಲೇಖಕ್ಕಾಗಿ 'ಗರುಡಫಲ' ಮರದ ವಿವರಣೆಯನ್ನು ಗಮನಿಸಬಹುದು.

"ಬೌದ್ಧಯುಗದ ಕಾಲದಿಂದ ಪ್ರಸಿದ್ಧಿಯಾಗಿರುವ ಮರ ಇದು. ಇದರ ಬೀಜಗಳನ್ನು ಅಗೆದು ತಿಂದು ರೋಗನಿವಾರಣೆ ಮಾಡಿಕೊಳ್ಳುತ್ತಿದ್ದರಂತೆ ಪಾಶ್ಚಾತ್ಯರಿಗೆ ೧೮೫೪ರ ವೇಳೆಗೆ ಇದರ ವೈದ್ಯಕೀಯ ಅಮೂಲ್ಯತೆ ಅರಿವಾಯಿತು. ಪೂರ್ವಬಂಗಾಳದಲ್ಲಿಯೂ ಉತ್ತರ ಬರ್ಮಾದ ಕಾಡುಗಳಲ್ಲಿ ಬೆಳೆಯುವ ಈ ಮರದ ಹೆಸರು ಹಿಡ್ನೋಕಾರ್ಪಸ್ ಕುರಜೈ (Hydnocarpus kurzil) ಈ ಮರದ ಬೀಜಗಳಿಗೆ ಕುಷ್ಠರೋಗದ ನಿವಾರಣ ಗುಣವಿದೆ. ಇದರ ಎಣ್ಣೆಯನ್ನು ನೇರವಾಗಿ ರೋಗಿಗೆ ಕೂಡುವುದರಿಂದ ವಾಸಿಯಾಗುವುದು ನಿಧಾನ. ಬಾಧೆಯೂ ಅಧಿಕ, ರಾಸಾಯನ ಶಾಸ್ತ್ರಜ್ಞರು ಈ ಎಣ್ಣೆಯಿಂದ ಇಥೈಲ್, ಎಸ್ಟರ್‌ಗಳೆಂಬ ಕೆಲವು ಸತ್ವಗಳನ್ನು ವಿಶ್ಲೇಷಿಸಿ ಬೇರೆಯಾಗಿಸಿದ್ದಾರೆ. ಇದರ ಪ್ರಯೋಗದಿಂದ ಕುಷ್ಠರೋಗ ಸಾಂಪ್ರದಾಯಕ ಪ್ರಯೋಗ ವಿಧಾನಕ್ಕಿಂತಲೂ ಬೇಗನೆ ಗುಣವಾಗುತ್ತದೆ. ೧೯೫೫ರ ಕಾಲದಲ್ಲಿ ಇದರ ಎಣ್ಣೆ ತೆಗೆಯುತ್ತಿದ್ದದ್ದು ಆ ಕಾಲದ ಸಣ್ಣಮಟ್ಟ ಗೃಹಕೈಗಾರಿಕೆಯ ಕೆಲಸವಾಗಿತ್ತು. ಈಗ ದೊಡ್ಡ ದೊಡ್ಡ ಕೈಗಾರಿಕೆಗಳಾಗಿ ಮಾರ್ಪಟ್ಟು ಗೃಹಕೈಗಾರಿಕೆ ನಾಶವಾಗುತ್ತಿವೆ. ಇದೇ ತರಹ ನಾಟಿ ಔಷಧಿಗಳು ನಾಶವಾಗಿ ಎಲ್ಲೋ ಅಲ್ಲೊಂದು ಇಲ್ಲೊಂದು ಗುಡ್ಡಗಾಡುಗಳಲ್ಲಿ ಉಸಿರಾಡುತ್ತಿವೆ. ಈ ರೀತಿ ಆಧುನಿಕತೆ ಬೆಳೆದಂತೆ ಹಳೆ ಸಂಸ್ಕೃತಿ ವಿನಾಶದಂಚಿಗೆ ತಲುಪಿರುವುದು ವಿಪರ್ಯಾಸ."[೯]

**ನಾಗೇಶ್ ಹೆಗಡೆ**ಯವರ 'ಇರುವುದೊಂದೇ ಭೂಮಿ'ಯಲ್ಲಿ ಸಾಮಾಜಿಕತೆ ನೋಡುವುದಾದರೆ ಜನಸಂಖ್ಯೆ ಬೆಳೆದಂತೆ ಆ ಜನರ ಆಹಾರ ಬಟ್ಟೆ ವಸತಿ ಆರೋಗ್ಯ ಮುಂತಾದ ಜೀವನೋಪಾಯಕ್ಕೆ ಬೇಕಾಗುವ ಮೂಲಭೂತ ಸೌಕರ್ಯಗಳು ಎಲ್ಲ ಸಮುದಾಯಕ್ಕೂ ಸಮಾನವಾಗಿ ದೊರೆಯುವಂತೆ ನೋಡಿಕೊಳ್ಳುವುದು ಪ್ರಜಾರಕ್ಷಕ ಸರ್ಕಾರದ ಮೂಲ ಕರ್ತವ್ಯ. ಆದ್ದರಿಂದಲೇ ಸರ್ಕಾರಗಳು ಹಲವಾರು ಯೋಜನೆಗಳನ್ನು ಜಾರಿಗೊಳಿಸಿವೆ. ಆದರೆ ಕೆಲವು ಯೋಜನೆಗಳನ್ನು ಸಿದ್ದಗೊಳಿಸುವಾಗ ಕೆಲವು ಮೂಲನಿವಾಸಿಗಳ ಮತ್ತು ಕೆಳವರ್ಗದವರ ಗ್ರಾಮೀಣ ರೈತಾಪಿ ಜನರ ಮೂಲಭೂತ ಹಕ್ಕಿಗೆ, ಅವರ ಸಂಸ್ಕೃತಿ ಆಹಾರ ವಸತಿಗಳಿಗೆ ಧಕ್ಕೆಯುಂಟುಮಾಡಿ ನಿರಾಶ್ರಿತರನ್ನಾಗಿ ಮಾಡಿದ್ದಲ್ಲದೆ ಆ ಜನರಿಗೆ ಪರಿಹಾರ ಮಾರ್ಗದಲ್ಲಿ ಕಲ್ಪಿಸಿಕೊಡದೆ, ಕೇವಲ ಭರವಸೆಗಳನ್ನು ನೀಡುತ್ತ ಸರ್ಕಾರಗಳು ಅವರನ್ನು ಅತಂತ್ರ ಸ್ಥಿತಿಗೆ ತಂದೊಡ್ಡುತ್ತಿವೆ. ಅಲ್ಲದೆ ಅಂತಹ ಯೋಜನೆಗಳಿಂದ ಪರಿಸರ ಮಾಲಿನ್ಯವಾಗಿ ಪ್ರಕೃತಿ ವಿಕೃತ ರೂಪ ತಾಳಿರುವುದು. ಈ ಎಲ್ಲ ಪರಿಣಾಮಗಳಿಂದ ಕೆಲವು ಯೋಜನೆಗಳು ಸೋಲುಂಡು ಆ ಯೋಜನೆಗಳ ವಿರುದ್ಧ

ಪ್ರತಿಭಟನೆಗೆ ಕಾರಣವಾಗಿದೆ. ಉದಾಹರಣೆಗೆ 'ಕಾಳಿ' ಕಣಿವೆಯ ಅಭಿವೃದ್ಧಿಯ ಕಾರ್ಯಗಳು ಮತ್ತು ನರ್ಮದಾ ಅಣೆಕಟ್ಟು ಯೋಜನೆ ಮುಂತಾದ ಸರ್ಕಾರಿ ಯೋಜನೆಗಳನ್ನು ಗಮನಿಸಬಹುದು.

ಕಾಳಿ ಕಣಿವೆಯಲ್ಲಿ ಇಂದು ಹೆಜ್ಜೆಹೆಜ್ಜೆಗೂ ಮಾನವನ ಹಸ್ತಕ್ಷೇಪ ಅಧ್ವಾನಗಳನ್ನು ಕಾಣಬಹುದು. ಕೇವಲ ೨೦ ವರ್ಷಗಳ ಹಿಂದೆ ಸ್ವಚ್ಛಂದವಾಗಿ ಹರಿಯುತ್ತಿದ್ದ ನದಿ, ಈಗ ಅಲ್ಲಿನ ಜೀವಜಂತುಗಳ ಪಾಲಿಗೆ ಕಣ್ಣೀರಿನ ಕೋಡಿಯಾಗಿದೆ. ಸಹಸ್ರಾರು ವರ್ಷಗಳಿಂದ ಕಗ್ಗಾಡಿನ ಮಧ್ಯೆ ತನ್ನ ಮಾರ್ಗ ತಾನೇ ಸವೆಸುತ್ತ ಕೊಳ್ಳ ನಿರ್ಮಿಸಿಕೊಳ್ಳುತ್ತ ಜೀವಂತಧಾರೆಯಾಗಿ ಧುಮುಕುತ್ತಿದ್ದ ಕಾಳಿ ಸ್ವತಃ ಈಗ ಕಂಗೆಟ್ಟು ಅಲ್ಲಲ್ಲಿ ಮಡುಗಟ್ಟಿ, ಕೊಳೆ ಪೇರಿಸಿಕೊಂಡು ಅಶ್ರುಧಾರೆಯಂತಾಗಿ ಅರಬ್ಬೀಸಮುದ್ರ ಸೇರುತ್ತಿದೆ.

ಈ ಕಾಳಿ ಕಣಿವೆಯ ಕಣ್ಣೀರಿನಂತೆ ನರ್ಮದಾ ನದಿಯ ಗೋಳನ್ನು ಯಾರೂ ಕೇಳುವವರಿಲ್ಲದಂತಾಗಿದೆ. ಯಾಕೆಂದರೆ ಹಳ್ಳಿಯ ಜನರ ಜೀವನೋಪಾಯ ಸೌಲಭ್ಯಗಳನ್ನು ದಿಲ್ಲಿಯ ದರ್ಬಾರಿನಲ್ಲಿ ಕುಳಿತು ಸಿದ್ಧಪಡಿಸುತ್ತಾರೆ. ಈ ಸರ್ಕಾರಿ ಪ್ರಭುಗಳು ಆ ಮೂಲನಿವಾಸಿಗಳ ಜೀವನ ಪ್ರಕೃತಿಯ ಬೆಟ್ಟಗುಡ್ಡ, ಕಾಡು, ನದಿ, ಸಮುದ್ರಗಳೊಂದಿಗೆ ಹೇಗೆ ಬೆಸೆದುಕೊಂಡಿದೆ ಎಂಬುದರ ಬಗ್ಗೆ ಅಧ್ಯಯನ ಮಾಡದೆ ತೀರ್ಮಾನಿಸುತ್ತಾರೆ. ನರ್ಮದಾ ನದಿಯ ಬಗ್ಗೆ ನಮ್ಮ ಸರ್ಕಾರವು ತೆಗೆದುಕೊಂಡ ತೀರ್ಮಾನವು ಇಂತಹದ್ದೆ. ಆದ್ದರಿಂದಲೇ (ನರ್ಮದಾ ಯೋಜನೆ ಸಾಧಕಬಾಧಕಗಳನ್ನು ಕಂಡುಕೊಂಡ ಜನ) ೧೯೮೫ರಲ್ಲಿ 'ನರ್ಮದಾ ಉಳಿಸಿ' ಚಳವಳಿ "ಇಂದು ಆದಿವಾಸಿ ಮತ್ತು ರೈತರ ಚಳವಳಿಗಳು ಅವರ ತುಂಡುಭೂಮಿ ಅಥವಾ ಕಾಡನ್ನುಳಿಸುವಂಥ ಚಳವಳಿಯಾಗಷ್ಟೇ ಉಳಿದಿಲ್ಲ. ಬದಲಿಗೆ ಅಭಿವೃದ್ಧಿ ಯೋಜನಾ ನಿರೂಪಣೆಗೆ ಸಂಬಂಧಿಸಿದ ಮೂಲಭೂತ ವಿಚಾರಗಳ ಬಗೆಗಿನ ಹೋರಾಟವಾಗಿ ವಿಸ್ತೃತಗೊಂಡಿದೆ. ಮಾಹಿತಿ ಹಕ್ಕಿನಿಂದ ಹಿಡಿದು ಅಭಿವೃದ್ಧಿ ಯೋಜನಾ ನಿರೂಪಣೆ ಹಾಗೂ ತತ್ಸಂಬಂಧಿ ಪ್ರಕ್ರಿಯೆಗಳ ಬಗೆಗಿನ ಆದ್ಯತೆ. ಪ್ರಕೃತಿ ಸಂಪನ್ಮೂಲ ನೆಲೆಯ ನಾಶ ಮತ್ತು ಅಸಮಾನತೆ ಉಂಟುಮಾಡುವ ಅಭಿವೃದ್ಧಿಯ ಬಗ್ಗೆ ಎಚ್ಚರವುಳ್ಳ ದೇಶದ ಎಲ್ಲ ಜನರ ಚಳವಳಿ ಅದಾಗಿದೆ".[೨೦] ಅಜ್ಞಾನದಿಂದ ದಾರಿ ತಪ್ಪುವ ಸರ್ಕಾರಗಳನ್ನು ಈ ಚಳವಳಿಗಳು ಎಚ್ಚರಿಸಿ ಸರಿದಾರಿ ತೋರುತ್ತವೆ. ಹಾಗಾಗಿ ಈ ಚಳವಳಿಗಳು ಅನಿವಾರ್ಯವಾಗಿದೆ. ಆದ್ದರಿಂದ ಸಮಾಜದಲ್ಲಿ ಸರ್ವರಿಗೂ ಸಮಪಾಲು ಎಂಬ ನಿಲುವಿನಿಂದ ನಾಗೇಶ್ ಹೆಗಡೆಯವರು ತಮ್ಮ ಬರವಣಿಗೆಗಳ ಮೂಲಕ ಹೋರಾಟವನ್ನು ಮುಂದುವರೆಸಿದ್ದಾರೆ.

ತೇಜಸ್ವಿಯವರ ಪರಿಸರ ಕಥನದಲ್ಲಿ ಸಾಮಾಜಿಕ ನೆಲೆಯನ್ನು ಗಮನಿಸುವುದಾದರೆ, ಪರಿಸರದ ಬಗ್ಗೆ ಅವರಿಗೆ ಅಂಧಶ್ರದ್ಧೆಯಾಗಲೀ, ಪಾಶ್ಚಾತ್ಯಮೌಲ್ಯಗಳ ಬಗ್ಗೆ ಹುಚ್ಚು

ಆಕರ್ಷಣೆಯಾಗಲೀ ಅಥವಾ ಯಾವುದರ ಬಗ್ಗೆಯೂ ಇತ್ಯಾತ್ಮಕವಾದ ಭಾವನೇ ಇಲ್ಲದ ಸಿನಿಕತೆಯೂ ಅವರಲ್ಲಿರಲಿಲ್ಲ. ಒಂದು ಪರಿಸರ ಎಂದರೆ ಕೇವಲ ಮರಗಿಡ ಪಶುಪಕ್ಷಿಗಳಲ್ಲಿ ಅವುಗಳೊಡನೆ ನಮ್ಮ ವೈಯಕ್ತಿಕ ಸಂಸ್ಕಾರದಿಂದಲ್ಲದೆ ನಮ್ಮ ಪುರಾಣ ಇತಿಹಾಸ ಸಮಾಜ, ಸಂಸ್ಕೃತಿ, ರಾಜಕೀಯ, ಅರ್ಥವ್ಯವಸ್ಥೆ. ಹೀಗೆ ಬದುಕಿನ ಹಲವು ಹತ್ತು ಸ್ತರಗಳಿಂದ ನಿರ್ದೇಶಿತವಾಗಿರುತ್ತದೆ.

ಪರಿಸರನಾಶದ ಬಗ್ಗೆ ಒಂದು ಸಂಸ್ಕೃತಿ ಕಣ್ಮರೆಯಾಗುತ್ತಿರುವ ಬಗ್ಗೆ ಗಾಢ ವಿಷಾದದಿಂದ ಬರೆಯುವಾಗಲೂ ಅದು ಅಳುಬುರುಕುತನವಾಗದಂತೆ ತಡೆಯುವ ಬೌದ್ಧಿಕ ವಿಧಾನವಾಗಿ ಕೂಡ ವಿನೋದ ದುಡಿಯುತ್ತದೆ. ಹಾವು ಗೊಲ್ಲರ ಎಂಗ್ಟನನ್ನು ದೂರದಿಂದ ನೋಡಿದಾಗ ಪಾಪ ಎನ್ನಿಸಿತು. ನಾಗರಿಕತೆ ಮುಂದುವರೆಯುತ್ತಾ, ಅವನ ಕುಲಕಸುಬುಗಳು, ಕೈಚಲಕಗಳು ನಿಧಾನವಾಗಿ ನಿರುಪಯುಕ್ತವಾಗುತ್ತಿದ್ದವು. ಸರ್ಕಾರ ಹಾವಿನ ಚರ್ಮವನ್ನು ರಫ್ತು ಮಾಡುವುದು ನಿಷೇಧಿಸಿದ ಮೇಲೆ ಹಾವಿನ ಚರ್ಮಗಳಿಗೆ ದುಡ್ಡು ಸಿಗುತ್ತಿರಲಿಲ್ಲ. ಬೇಟೆ ಮಾಡುವುದಕ್ಕೆ ಅರಣ್ಯ ಇಲಾಖೆಯವರು ಅವಕಾಶ ಕೊಡುತ್ತಿರಲಿಲ್ಲ. ಭಾರತದ ಕಾಡುಗಳು, ಮೃಗಪಕ್ಷಿಗಳು, ನದಿಝರಿಗಳು, ತಾಳ್ಮೆಯಿಂದ ತಮ್ಮ ಅವಸಾನವನ್ನು ಕಾಯುತ್ತಿರುವಂತೆ ಎಂಗ್ಟನೂ ಕಾಯುತ್ತಿದ್ದ.

ಎಂಗ್ಟನ ವಿಶಿಷ್ಟ ವ್ಯಕ್ತಿಗಳ ಮಾತು ಹಾಗಿರಲಿ ಸಾಮಾನ್ಯ ರೈತರಿಗೂ ತಮ್ಮ ಪರಂಪರಾಗತ ಬದುಕಿನ ಬಗ್ಗೆ ಆಸಕ್ತಿ ಹೋಗುತ್ತದೆ. ಈ ಜೀವನಕ್ರಮ ತಮ್ಮ ಆಸೆಗಳನ್ನು ಅವಶ್ಯಕತೆಗಳನ್ನು ಪೂರೈಸಲಾರದೆಂದು ಅವರು ಪಟ್ಟಣಕ್ಕೆ ಹೋಗುತ್ತಾರೆ. ಸಣ್ಣಸಣ್ಣ ಭೂಮಾಲೀಕರು ತಮ್ಮ ಜಮೀನನ್ನು ಮಾರಿ ಪಟ್ಟಣಕ್ಕೆ ಹೋಗಿ ಜವಾನರಾಗಲು ಇಷ್ಟಪಡುತ್ತಾರೆ. ಏಕೆಂದರೆ ಆರ್ಥಿಕವಾಗಿ ಅದೇ ಹೆಚ್ಚು ಲಾಭದಾಯಕ ಪರಿಸ್ಥಿತಿ ಇಷ್ಟು ಭೀಕರವಾಗಿರುವಾಗ ಪರಿಸರವನ್ನು ಸಂರಕ್ಷಿಸಿ ಜೀವರಾಶಿಯನ್ನು ಉಳಿಸಿ ಎಂಬ ಭಾವುಕ ಹೇಳಿಕೆಗಳೇ ಅಸಂಬದ್ಧವೆನಿಸಬಿಡುವುದು ಎಂದು ತಮ್ಮ ಭಾವುಕ ಭಾವನೆಯನ್ನು ತಮ್ಮ ಅನುಭವದ ಮೂಲಕ ಪರಿಸರ ಕಥನ ರೂಪದಲ್ಲಿ ವ್ಯಕ್ತಪಡಿಸುತ್ತಿದ್ದಾರೆ.[೨೧]

ಸಾಮಾಜಿಕ ಬದ್ಧತೆ ಎಲ್ಲರ ಜವಾಬ್ದಾರಿ. ಆದರೆ ಕವಿ ಅಥವಾ ಸಾಹಿತಿಗಳ ಬದುಕಲ್ಲಿ ಇದು ಬರೀ ಜವಾಬ್ದಾರಿಯಾಗಿರದೆ ಹೊಣೆಗಾರಿಕೆಯಲ್ಲಿ ಚಿಂತನೆ ಮುಂದಾಲೋಚನೆ, ಕ್ರಿಯಾಶೀಲತೆ, ಸಮಗ್ರತೆ, ಸಮನ್ವಯತೆ ಪರಿಪೂರ್ಣ ದೃಷ್ಟಿದರ್ಶನವಾಗಿರುತ್ತದೆ. ಎಲ್ಲಾ ದಾರ್ಶನಿಕರ, ಸಮಾಜಚಿಂತಕರ ಸಂತರ ಯುಗಪುರುಷರ ಬದುಕು ಸಹ ಈ ಬಗೆಯದೇ ಇಂತಹವರು ಎಲ್ಲಾ ಕಾಲಕ್ಕೂ ಸಲ್ಲುವವರಾಗಿರುತ್ತಾರೆ. ಅವರ ಬದುಕೇ ಇತಿಹಾಸದ ಸೃಷ್ಟಿಗೆ ಕಾರಣವಾಗುತ್ತದೆ. ಹೀಗಾಗಿ ಸದಾ ಇಂಥವರು ಜನರ ಹೃದಯಗಳಲ್ಲಿ ಬೇರುಬಿಟ್ಟಿರುತ್ತಾರೆ.

## ಒಟ್ಟು ನೋಟ

ಆಧುನಿಕ ಕನ್ನಡ ಸಾಹಿತ್ಯ ವೈಜ್ಞಾನಿಕ ಸಮಾಜವಾದವನ್ನು ಎತ್ತಿ ಹಿಡಿಯುವ ಉದ್ದೇಶ ಉಳ್ಳದ್ದು. ಶೋಷಿತ ಜನಾಂಗ, ಸಂಸ್ಕೃತಿ, ಪರಿಸರ ಸಂರಕ್ಷಣೆ, ದೇಶವನ್ನು ರಕ್ಷಿಸುವ ಮತ್ತು ಅವುಗಳ ಪರ ನಿಲ್ಲುವ ಗುರಿ ಉಳ್ಳದ್ದೇ ಆಧುನಿಕ ಕನ್ನಡ ಸಾಹಿತ್ಯ. ಆಧುನಿಕ ಕನ್ನಡ ಸಾಹಿತ್ಯವು ಬಹುಕೋನಗಳಿಂದ ಸಮಾಜದ ಬದುಕನ್ನು ಗ್ರಹಿಸುತ್ತ ಎಲ್ಲೆಲ್ಲಿ ಮನುಷ್ಯ ಬದುಕುತ್ತಿರುವನೋ ಅಲ್ಲಲ್ಲಿ ಇರುವ ರಾಜಕೀಯ, ಸಾಂಸ್ಕೃತಿಕ ಹಾಗೂ ಅಸಮಾನತೆಗಳನ್ನು ಧ್ವಂಸಗೊಳಿಸಲು ಯಾವಾಗಲೂ ಸದಾ ತುಡಿಯುತ್ತಿರುತ್ತದೆ. ದೇಶದಿಂದ ದೇಶಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ಶೋಷಣೆಯ ಮುಖಗಳು ವಿಭಿನ್ನವಾಗಿದ್ದರೂ ಆಧುನಿಕ ಸಾಹಿತ್ಯದ ತಾತ್ವಿಕತೆ ಮಾತ್ರ ಆ ಸಮಸ್ಯಾತ್ಮಕ ಮುಖಗಳನ್ನೆಲ್ಲ ಛೇದಿಸುವುದು ಸಾಹಿತ್ಯದ ಒಂದು ಅಂಗವಾಗಿದೆ.

ಮನುಷ್ಯನ ಅತ್ಯಂತ ಶ್ರೇಷ್ಠವಾದ ಸೃಷ್ಟಿಯೆಂದರೆ ಗ್ರಂಥರಾಶಿ, ಅದರಷ್ಟು ಶಾಶ್ವತವಾದ ಮನುಷ್ಯ ಸೃಷ್ಟಿ ಮತ್ತೊಂದಿಲ್ಲ. ಸಾಹಿತಿಯ ನಿಜವಾದ ಸಂತಾನ ಗ್ರಂಥಗಳು. ಉತ್ತಮ ಸಾಹಿತ್ಯಗಳು ಜ್ಞಾನಿಯ ಚಿರಂತನ ಚೈತನ್ಯರೂಪ ಹಾಗೆಯೇ ಪುಸ್ತಕಗಳು ನಮ್ಮ ಸಂಸ್ಕೃತಿಯ ದೇಗುಲವಿದ್ದಂತೆ, ಮಹಾಸಂತರ ಸಮಾಧಿ ಭವಿಷ್ಯತ್ತಿನ ತಳಹದಿ. ದಿನನಿತ್ಯದ ಬದುಕಿನ ಉದ್ವಿಗ್ನಮಯ ಸನ್ನಿವೇಶಗಳಿಂದ ಜರ್ಜರಿತವಾಗಿರುವ ಮನಸ್ಸನ್ನು ಯಾವುದು ಚೈತನ್ಯ ನೀಡಬಲ್ಲದೋ, ಮನಸ್ಸಿಗೆ ಉಲ್ಲಾಸವನ್ನು ಯಾವುದು ಮುದ ನೀಡಬಲ್ಲದೋ, ಅದೇ ನಿಜವಾದ ಸಾಹಿತ್ಯ. ಇಂತಹ ಸಾಹಿತ್ಯ ಮಾತ್ರ ಕಾಲದೇಶಗಳನ್ನು ದಾಟಿ ಜೀವಂತವೂ ಹಾಗೂ ಉಪಯುಕ್ತವೂ ಆಗಿ ಉಳಿಯುತ್ತದೆ.

ಆಧುನಿಕ ಕನ್ನಡದ ಪರಿಸರವಾದಿ ಚಿಂತಕರು ಕನ್ನಡ ಸಾಹಿತ್ಯದಲ್ಲಿ ಪರಿಸರ ಸಂರಕ್ಷಣೆ ಬಗ್ಗೆ ಆರೋಗ್ಯಕರವಾದ ರೀತಿಯಲ್ಲಿ ಜಾಗೃತಿ ಮೂಡಿಸಬಲ್ಲಂಥದು ಎಂಬುದನ್ನು ನಿರ್ಭಿತವಾಗಿ ಹೇಳಬಹುದು. ಪರಿಸರವು ತನ್ನ ಮೂಲ ರೂಪ ಕಳೆದುಕೊಂಡಿದೆ. ಅದನ್ನು ಹಿಂದಿನ ರೂಪಕ್ಕೆ ಬರುವಂತೆ ಮಾಡಬೇಕು ಎಂದು ಆಶಿಸುತ್ತಲೇ ಅಂತಹ ಪರಿಸರದ ನಾಶದ ಮೇಲೆಯೇ ನಿಂತಿರುವ ಆಧುನಿಕ ಜೀವನ ಕ್ರಮವನ್ನು ಹೊಂದಿರುವುದು ಸಹ ಈ ಚಿಂತನೆಯ ಒಂದು ವೈವಿದ್ಯ. ನಿಸರ್ಗದ ಸಮತೋಲನವನ್ನು ಕೆಡಿಸುತ್ತಿರುವ ಏಕಪಕ್ಷೀಯವಾಗಿ ಈ ಭೂ ಮಂಡಲದಲ್ಲಿರುವ ನೀರು, ಗಾಳಿ, ಕಾಡು, ಭೂಮಿಯನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸುತ್ತಿರುವ ಶಕ್ತಿಗಳನ್ನು ನಿರ್ಧಿಷ್ಟವಾಗಿ ಗುರುತಿಸದೆ ಬರವಣಿಗೆಯ ರೂಪದಲ್ಲಿ ಇರುವ ವಾದಗಳು ಮತ್ತು ಅರೆ ಸತ್ಯಗಳನ್ನು ಹೇಳುತ್ತಿರುತ್ತವೆ. ಅವುಗಳು ಸಹ ರಾಜಕೀಯ ಪ್ರೇರಿತವಾಗಿರುತ್ತವೆ.

ನಿಸರ್ಗದ ಈ ಸಾಮರಸ್ಯವನ್ನು ಸಹಿಸಲಾರದ ಜೀವಿ ಇನ್ನೊಂದಿಗೆ ಅದು ಮಾನವ ಜೀವಿ ಮಾನವನ ಹೊರತಾಗಿ ಉಳಿದೆಲ್ಲ ಪಶು-ಪಕ್ಷಿಗಳನ್ನು ಆದಿವರ್ಗ ಜೀವಿಗಳೆನ್ನಬಹುದು.

ಈ ಅಮಾಯಕ ಜೀವಿಗಳು ನಿಸರ್ಗದೊಡನೆ ಒಂದಾಗಿ ಬಾಳುತ್ತಿವೆ. ಆದರೆ ಮಾನವ ಎನ್ನುವ ಈ ಜೀವಿ ದುರಾಸೆ ಬಹಳ. ಪ್ರಕೃತಿಯ ಸಂಪತ್ತನ್ನೆಲ್ಲಾ ತಾನೇ ಭೋಗಿಸುವ ಸ್ವಾರ್ಥ. ಈ ಜೀವಿಗೆ ಬೇರೆ ಜೀವಿಗಳ ಸೌಮ್ಯವನ್ನು ಕಂಡರೆ ಸಹಿಸಲಾಗುವುದಿಲ್ಲ. ಇವನಿಗೆ ಉಳಿದ ಜೀವಿಗಳ ಮೇಲೆ ಹೊಟ್ಟೆಕಿಚ್ಚು ಇಷ್ಟೇ ಅಲ್ಲ ಇಂಥವರ ಕೆಟ್ಟ ದೃಷ್ಟಿಯಿಂದಾಗಿ, ಇಲ್ಲಿಯವರೆಗೆ ಒಂದು ಕ್ರಮದಿಂದ ನಡೆಯುತ್ತಿದ್ದ ಎಲ್ಲಾ ಜೀವಿಗಳಿಗೆ ನೆಲೆಯಾದ ನಿಸರ್ಗದ ಆಶ್ರಯ ಭಗ್ನವಾಗುತ್ತಿದೆ. ಆದರೆ ಭೂಮಿತಾಯಿ ನಿಸ್ಸಹಾಯಕಳು. ತನ್ನ ಒಡಲೆಲ್ಲ ಹೂವು, ಕಾಯಿ ಹಾಗೂ ಹಣ್ಣುಗಳಿಂದ ತುಂಬಿದೆ. ಅದನ್ನೆಲ್ಲಾ ದುರಾಸೆಯಿಂದ ದೋಚುವವರನ್ನು ಅವಳು ತಡೆಯಲಾಗದೆ ಕೊರಗುತ್ತಿದ್ದಾಳೆ, ಮರುಗುತ್ತಿದ್ದಾಳೆ. ಹಾಗೂ ಶೋಷಣೆಯಿಂದ ಸೊರಗುತ್ತಿದ್ದಾಳೆ. ಆದುದರಿಂದ ಬೆದರಿ ಒಡಲು ಯತ್ನಿಸುವ ಹರಿಣಿಯಂತೆ ಬೆದರಿ ನಿಂತಿದ್ದಾಳೆ. ಯಾವ ಗಳಿಗೆಯಲ್ಲಿ ಯಾರು ಆಕ್ರಮಣ ಮಾಡುತ್ತಾರೋ ಎಂದು ಬೆದರಿ ನಿಂತಿದ್ದಾಳೆ. ಸ್ಥೈರ್ಯ ಹಾಗೂ ಧೈರ್ಯವನ್ನು ಕಳೆದುಕೊಂಡು ಹರಣಿಯಾಗಿದ್ದಾಳೆ.

ಭಾರತದೇಶವನ್ನು ಉದಾಹರಣೆಗೆ ತೆಗೆದುಕೊಳ್ಳುವುದಾದರೆ ಪ್ರಾಚೀನ ಕಾಲದಿಂದಲೂ ಈ ದೇಶದ ಮೇಲೆ ಆಕ್ರಮಣಗಳು ನಡೆಯುತ್ತಲೇ ಇವೆ. ಸುಸಂಸ್ಕೃತರಾದ ಇಲ್ಲಿಯ ಜನ ಹಾಗೂ ಆ ಕಾರಣದಿಂದಲೇ ದುರ್ಬಲರಾದ ಇಲ್ಲಿ ಜನರು ಆಕ್ರಮಣಕಾರರಿಂದ ಅತ್ಯಾಚಾರಕ್ಕೆ ಒಳಗಾಗುತ್ತಲೇ ಬಂದಿದ್ದಾರೆ. ಈ ಆಕ್ರಮಣಕಾರರಿಂದ ಪ್ರಕೃತಿಯೂ ಸಹ ಕಂಪಿಸಿದೆ. ಅಷ್ಟೇ ಏಕೆ? ಜೀವ ನಿರ್ಜೀವ ವಸ್ತುಗಳು ಸಹ ನಡುಗಿವೆ. ವಸುಂಧರೆಗೆ ಪ್ರತಿ ಜೀವಿಯೂ ಸಸ್ಯಯವೇ ಇರಲಿ ಅಥವಾ ಪ್ರಾಣಿ ಸಂಕುಲಗಳೇ ಇರಲಿ ಎಲ್ಲವು ತನ್ನ ಮಗುವೆ. ಹಾಗಾಗಿ ಇಲ್ಲಿ ನಡೆಯುತ್ತಿರುವ 'ಜೀವದ ಬೇಟೆ'ಯನ್ನು ಕಂಡು ಅವಳು ಶೋಕಿಸುತ್ತಿದ್ದಾಳೆ. ಮಾನವನ ಕ್ರಾಂತಿ ಹೆಚ್ಚಾಗಿದೆ. ಇದೀಗ ಆತ ರಾಜ್ಯವನ್ನು ಕಟ್ಟಿಕೊಂಡಿದ್ದಾನೆ. ಪರ ರಾಜ್ಯಗಳನ್ನು ಆಕ್ರಮಿಸಿ ಚಕ್ರವರ್ತಿಯಾಗುತ್ತಿದ್ದಾನೆ. ಆದರೆ ನಾಗರೀಕತೆಯ ಈ ಆಟದಲ್ಲಿ ಸ್ವತಃ ಮಾನವನೇ ಬಲಿಯಾಗುತ್ತಿದ್ದಾನೆ.

ಇಂತಹ ಭೂಮಿತಾಯಿ ತನ್ನ ದುಃಖವನ್ನು ತನ್ನೊಳಗೆ ಒತ್ತಿ ಹಿಡಿದುಕೊಂಡು ಮಾನವರಿಗೆ ಅಂಗಲಾಚುತ್ತಿದ್ದಾಳೆ. ನನ್ನನ್ನು ನಿರ್ಜೀವ ನೆಲವೆಂದು ತಿಳಿದು ಕಡಿಯಬೇಡಿ, ನಾನು ಕೇವಲ ಬಡವೆ ಅಲ್ಲ ನಾನು ಉಸಿರಾಡುವ ಒಡಲು. ಯಾಕೆಂದರೆ ನನ್ನ ಉಸಿರಿನಿಂದಲೇ ಕೋಟಿ ಕೋಟಿ ಜೀವಿಗಳು ನನ್ನ ಮಡಿಲಿನಲ್ಲಿ ಬದುಕುತ್ತಿವೆ ಎಂದು ಲೇಖಕರು ಭೂಮಿತಾಯಿಯ ಮೇಲಿನ ಮಾನವನು ಕ್ರೌರ್ಯವನ್ನು ಎಸಗುತ್ತಿರುವುದನ್ನು ನಿಲ್ಲಿಸಲಿ ಎಂದು ತಮ್ಮ ಪರಿಸರ ಕಥೆಗಳಲ್ಲಿ ತಮ್ಮ ಭಾವನೆಗಳನ್ನು ಪ್ರಜ್ಞಾಪೂರ್ವಕವಾಗಿ ಪ್ರತಿಪಾದಿಸುವ ಅಲ್ಲಿನ ವೈಚಾರಿಕತೆಯನ್ನು ಒಟ್ಟಾಗಿ ವರ್ತಮಾನದ ನೆಲೆಯಲ್ಲಿ ಇಟ್ಟು ಚರ್ಚಿಸಲಾಗಿದೆ.

*****

## ಕೊನೆಟಿಪ್ಪಣಿಗಳು

೧. ಡಾ. ಗಣೇಶ್, ಕುವೆಂಪು ಹಾಗೂ ಕಾರಂತರ ಕಥಾಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ, ಪು. ೨೫೧

೨. ಓ.ಎಲ್.ನಾಗಭೂಷಣಸ್ವಾಮಿ, ವಿಮರ್ಶೆ ಪರಿಭಾಷೆ, ಪು. ೧೦೯

೩. ಲಂಕೇಶ್, ಸಾಹಿತಿ – ಸಾಹಿತ್ಯ ವಿಮರ್ಶೆ, ಪು. ೧೫

೪. ಕುವೆಂಪು, ಕಲಾಸುಂದರಿ, ಪು. vii

೫. ಬಿ.ಜಿ.ಎಲ್ ಸ್ವಾಮಿ, ಹಸುರು ಹೊನ್ನು. ಪು. ೩೭೩

೬. ಚಂದ್ರಶೇಖರ ನಂಗಲಿ, ಕಾಡು ಮತ್ತು ತೋಪು, ಪು. ೭೮

೭. ನಾಗೇಶ್ ಹೆಗಡೆ, ಇರುವುದೊಂದೇ ಭೂಮಿ, ಪು. ೭೪೧

೮. ಕುವೆಂಪು, ಮಲೆನಾಡಿನ ಚಿತ್ರಗಳು, ಪು. ೭೪–೭೫

೯. ಡಾ. ದ್ರಾಕ್ಷಾಯಿಣಿ, ಕುವೆಂಪು ಸಾಹಿತ್ಯದಲ್ಲಿ ಪ್ರಕೃತಿ, ಪು. ೨೭

೧೦. ಕುವೆಂಪು, ಮಲೆನಾಡಿನ ಚಿತ್ರಗಳು, ಪು. ೭೪–೭೫

೧೧. ತೇಜಸ್ವಿ, ಪರಿಸರದ ಕತೆ, ಪು. ೨೧–೨೨

೧೨. ಬಿ.ಜಿ.ಎಲ್.ಸ್ವಾಮಿ, ಹಸುರು ಹೊನ್ನು, ಪು. ೧೮–೧೯, ೨೨–೨೩

೧೩. ನಾಗೇಶ್ ಹೆಗಡೆ, ಇರುವುದೊಂದೇ ಭೂಮಿ, ಪು. ೧೬೧

೧೪. ಚಂದ್ರಶೇಖರ ನಂಗಲಿ, ಕಾಡು ಮತ್ತು ತೋಪು, ಪು. ೧೧

೧೫. ನಾಗೇಶ್ ಹೆಗಡೆ, ಇರುವುದೊಂದೆ ಭೂಮಿ, ಪು. ೪೩

೧೬. ನಾಗೇಶ್ ಹೆಗಡೆ, ಇರುವುದೊಂದೆ ಭೂಮಿ, ಪು. ೨೫–೨೬, ೩೪–೩೫.

೧೭. ಚಂದ್ರಶೇಖರ ನಂಗಲಿ, ಕಾಡು ಮತ್ತು ತೋಪು, ಪು. ೧೨.

೧೮. ಕುವೆಂಪು, ಮಲೆನಾಡಿನ ಚಿತ್ರಗಳು, ಪು. ೭೮–೭೯

೧೯. ಬಿ.ಜಿ.ಎಲ್.ಸ್ವಾಮಿ, ಹಸುರು ಹೊನ್ನು, ಪು. ೫೨

೨೦. ತೇಜಸ್ವಿ, ಪರಿಸರದ ಕತೆ, ಪು. ೫೦–೫೧

೨೧. ನಾಗೇಶ್ ಹೆಗಡೆ, ಇರುವುದೊಂದೆ ಭೂಮಿ, ಪು. ೧೩೦

*****

# ಅಧ್ಯಾಯ – ೬
# ಸಮಾರೋಪ

೧೯೨೦ರ ದಶಕದಲ್ಲಿ ಕನ್ನಡ ಸಾಹಿತ್ಯದಲ್ಲಿ ಹೊಸ ಜೀವ ಸಂಚಾರವಾಗಿ ಕನ್ನಡದಲ್ಲಿ ನಿಜವಾದ ಆಧುನಿಕ ಯುಗ ಆರಂಭವಾಯಿತು. ಹೊಸ ರೂಪ ಸಂವೇದನೆ ಆಶಯಗಳನ್ನು ಆವಿಸ್ಕರಿಸಿಕೊಂಡು ಬಂದ ಈ ಸಾಹಿತ್ಯ ರೂಪಕ್ಕೆ 'ನವೋದಯ ಸಾಹಿತ್ಯ' ಅಥವಾ 'ರಮ್ಯ ಸಾಹಿತ್ಯ' ಎಂದು ಕರೆಯಲಾಯಿತು. ಸಾಹಿತ್ಯದ ಹಲವಾರು ಪ್ರಕಾರಗಳಾದ ಕತೆ, ಕಾದಂಬರಿ, ಕಾವ್ಯ, ವಿಮರ್ಶೆ ಹೀಗೆ ಅನೇಕ ಕ್ಷೇತ್ರಗಳಲ್ಲಿ ಲೇಖಕರು ಸಾಹಿತ್ಯ ಕೈಂಕರ್ಯವನ್ನು ನಡೆಸಿದ್ದಾರೆ. ಆದರೆ ಪರಿಸರ ಕಥನವನ್ನು ಕುರಿತು ವಿಷಯವನ್ನು ಮಂಡಿಸಿದವರ ಸಂಖ್ಯೆ ತೀರ ಕಡಿಮೆ ಅನ್ನುವಷ್ಟಿದೆ. ಹಾಗಿದ್ದರೂ ಕೆಲವರು ಪರಿಸರ ಅಧ್ಯಯನ ಹಾಗೂ ಕಥನಗಳ ರಚನೆಯಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಕಾಡುಗಳನ್ನು ಸುತ್ತಿ ತಮ್ಮ ಅನುಭವಗಳ ಜೊತೆಗೆ ಜೀವ ಪರಿಸರದ ಚಲನವಲನಗಳ ಬಗ್ಗೆ ಸೂಕ್ಷ್ಮವಾಗಿ ಚರ್ಚಿಸಿದ್ದಾರೆ. ಈ ಮೂಲಕ ಪರಿಸರದ ಬಗ್ಗೆ ಅಧ್ಯಯನ ಮಾಡುವವರಿಗೆ ಮಾರ್ಗದರ್ಶಕರಾಗಿ ಕಂಡುಬರುತ್ತಾರೆ.

ಇದೇ ದಿಕ್ಕಿನಲ್ಲಿ ಚಿಂತಿಸುವ ಬರೆಯುವ ಬದುಕುತ್ತಿರುವ ಹಲವು ಲೇಖಕರು ತಮ್ಮ ಕತೆ, ಕಾದಂಬರಿ, ನಾಟಕಗಳಲ್ಲಿ ಪರಿಸರದ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ಬಂಡಾಯದ ಮೂಲಕ ಎತ್ತಿಹಿಡಿಯುವ ಮತ್ತು ಪರಿಸರ ಸಂರಕ್ಷಣೆಯ ಬಗ್ಗೆ ಜಾಗೃತಿ ಮೂಡಿಸುವಲ್ಲಿ ವಿಶೇಷ ಕಾಳಜಿ ವಹಿಸಿ ತಮ್ಮ ಕೌಶಲವನ್ನು ಮೆರೆದಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯ ವಿಸ್ತರಿಸಿಕೊಂಡಿರುವ ಎಲ್ಲ ಸಾಹಿತ್ಯ ಪಂಥಗಳು ಪ್ರಾಕೃತಿಕ ಪರಿಸರ ಸಂಬಂಧಿ ವಿಷಯ ವಸ್ತುಗಳನ್ನು ಕೇಂದ್ರವಾಗಿಟ್ಟುಕೊಂಡು ಬೆಳೆದಿಲ್ಲದಿರುವುದು ನಿರ್ವಿವಾದ. ಆದರೆ ಅಲ್ಲಲ್ಲ ವಿರಳವಾಗಿ ಕೆಲವು ಕೃತಿಗಳಲ್ಲಿ ಜೀವಪರ ಜೀವಕೇಂದ್ರಿತ ತಿಳುವಳಿಕೆಯ ಧೋರಣೆಗಳಿಂದ ಕೂಡಿರುವುದನ್ನು ಗುರುತಿಸಲಾಗಿದೆ. ಮೊದಲಿಗೆ ಇಂತಹ ಕೃತಿಗಳು ನವೋದಯ ಸಾಹಿತ್ಯ ಸಂದರ್ಭದಲ್ಲೇ ದೊರೆಯುತ್ತವೆ. ನವೋದಯ ಕವಿಗಳು ಪ್ರಕೃತಿ ಆರಾಧಕರಾಗಿದ್ದು, ಎಲ್ಲ ಭಾವಜೀವಿಗಳಾಗಿದ್ದು ಯಾರೂ ದೇವರನ್ನು ವಿರೋಧಿಸಲಿಲ್ಲ. ಹೆಚ್ಚಾಗಿ ಅವರು ಭೂಮಿ, ಸೂರ್ಯ, ಚಂದ್ರ, ಪ್ರಾಣಿ, ಪಕ್ಷಿ, ಗಿಡಮರ, ನದಿ, ಸಾಗರ ಮುಂತಾದ ಜೀವ ಪ್ರಕೃತಿಯಲ್ಲೆಲ್ಲ ದೈವತ್ವವನ್ನೇ ಕಲ್ಪಿಸಿಕೊಂಡವರು ಇದಕ್ಕೆ ಪ್ರೇರಣೆ ಇಂಗ್ಲಿಷ್ ರೋಮ್ಯಾಂಟಿಕ್ ಸಾಹಿತ್ಯ ಪಾಶ್ಚಾತ್ಯ ರೋಮ್ಯಾಂಟಿಕ್ ಕವಿಗಳಿಂದ ಪ್ರೇರಣೆಪಡೆದು ರೂಪುಗೊಂಡ ನವೋದಯ ಸಾಹಿತ್ಯ ಮಾತ್ರ ಪಾಶ್ಚಾತ್ಯರ ಅನುಕರಣೆಯಂತೆ ತೋರದೆ, ತನ್ನದೇ ಆದ ಪ್ರಾದೇಶಿಕ ಸೊಗಸುಗಳನ್ನು ಅನೇಕ ಕವಿಗಳ ವಿವಿಧ ಕಾವ್ಯಾಭಿವ್ಯಕ್ತಿಗಳಲ್ಲಿ

ಪ್ರಕಟಿಸಿತು. ಕವಿತೆ, ನಾಟಕ, ಕತೆ, ಕಾದಂಬರಿ, ಮಹಾಕಾವ್ಯ ಇತ್ಯಾದಿ ಪ್ರಕಾರಗಳಲ್ಲಿ ಈ ಸಾಹಿತ್ಯ ಕನ್ನಡದ್ದೇ. ಕನ್ನಡ ಜನತೆಯ ಜೀವನದಿಂದ ಸಂಭವಿಸಿದ್ದೇ ಎಂಬುದನ್ನು ಖಚಿತಪಡಿಸಿಕೊಂಡಿತು. ಈ ಸಾಹಿತ್ಯದ ರಾಷ್ಟ್ರೀಯ ಸ್ವಾತಂತ್ರ್ಯ ಚಳವಳಿ ಹಾಗೂ ಕರ್ನಾಟಕದ ಏಕೀಕರಣ ಚಳವಳಿಗೂ ಹಿನ್ನೆಲೆಯನ್ನು ಒದಗಿಸಿತು. ದೇಶಭಕ್ತಿ ಮೂಲವಾದ ಕನ್ನಡ ನಾಡುನುಡಿಗಳ ಅಭಿಮಾನವನ್ನು ಕುರಿತಾದ ಸಾಹಿತ್ಯಾಭಿವ್ಯಕ್ತಿಗಳೂ ಕಾಣಿಸಿಕೊಂಡವು.

ಈ ಸಂಶೋಧನಾ ನಿಬಂಧದಲ್ಲಿ ಇದುವರೆಗೆ ಪರಿಸರ ಕಥನಗಳ ತೌಲನಿಕವಾಗಿ ಸಮೀಕ್ಷಿಸುತ್ತಾ ಬೇರೆ ಬೇರೆ ಪ್ರದೇಶಗಳ ಸಂಸ್ಕೃತಿಗಳ ಪರಿಚಯದಿಂದ ಅಲ್ಲಿನ ವಾಸ್ತವಾಂಶಗಳನ್ನು ಇತಿಹಾಸ ಮತ್ತು ಭೂಗೋಳ ಹಿನ್ನೆಲೆಯಲ್ಲಿ ಶೋಧಿಸಲು ಸಾಧ್ಯವಾಗಿದೆ. ಅರಣ್ಯ ಪ್ರದೇಶಗಳಲ್ಲಿ ವಾಸಿಸುವ ಅಲ್ಲಿನ ಜನರ ನಡೆ–ನುಡಿ, ಆಚಾರ–ವಿಚಾರ ಮತ್ತು ಸಾಮಾಜಿಕ ಧಾರ್ಮಿಕ, ಆರ್ಥಿಕ ಮುಂತಾದವುಗಳ ಅರ್ಥಪೂರ್ಣವಾಗಿ ಹೊಸ ಪರಿಕಲ್ಪನೆಗಳ ಅಡಿಯಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಈ ಹೊತ್ತಿನಲ್ಲಿ ಜಾಗತಿಕವಾಗಿ ತಲೆದೋರಿರುವ ಹಲವು ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸುವ ಪ್ರಯತ್ನ ಮಾಡಲಾಗಿದೆ. ಮುಖ್ಯವಾಗಿ ಜನರ ಬದುಕನ್ನು ಪರಿಸರದ ಜೊತೆ ಮುಖಾಮುಖಿಯಾಗಿಸಿಕೊಂಡು ಮಾನವೀಯ ಬಾಂಧವ್ಯದ ಬೆಸುಗೆಯ ಆಳವಾದ ಅಧ್ಯಯನದ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಪ್ರಸ್ತುತ ಸಂಶೋಧನ ನಿಬಂಧದ ಶೀರ್ಷಿಕೆ "ಆಧುನಿಕ ಕನ್ನಡದ ಪ್ರಾತಿನಿಧಿಕ ಪರಿಸರ ಕಥನಗಳ ಅಧ್ಯಯನ" ಎಂಬುದಾಗಿದೆ. ಇದು ಸಮಾರೋಪವನ್ನು ಒಳಗೊಂಡಂತೆ ಮುಖ್ಯವಾಗಿ ಆರು ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡಿದೆ. ಕನ್ನಡ ಸಾಹಿತ್ಯದ ಸಾಮಾಜಿಕ ಪರಿಸರ ಪ್ರಜ್ಞೆಯ ವಿಕಾಸದ ಹಾದಿಯನ್ನು ಹಿನ್ನೆಲೆಯಲ್ಲಿಟ್ಟುಕೊಂಡು ಪರಿಸರ ಕಥನಗಳ ಅಧ್ಯಯನ ಅನಾವರಣಗೊಂಡಿರುವ ಪರಿಸರ ಪ್ರಜ್ಞೆಯ ಮುಖ್ಯ ನೆಲೆಗಳನ್ನು ಶೋಧಿಸಲು ಪ್ರಯತ್ನಿಸಿದೆ. ಈ ಮೂಲಕ ಪರಿಸರ ಕಥನಗಳಲ್ಲಿ ಚಾರಿತ್ರಿಕ ಮಹತ್ವವನ್ನು ಗುರುತಿಸುವ ಪರಿಸರ ಸಂರಕ್ಷಣೆಯ ಚಿಂತನೆಯನ್ನು ಮೌಲ್ಯೀಕರಿಸುವ ಪರಿಸರ ಸಂರಕ್ಷಣೆ ನಮ್ಮೆಲರ ಆದ್ಯ ಕರ್ತವ್ಯ ಎಂಬ ದೃಷ್ಟಿಕೋನದಲ್ಲಿ ಈ ಅಧ್ಯಯನವು ನಡೆದಿದೆ.

ಆಧುನಿಕ ಕನ್ನಡದ ಪ್ರಾತಿನಿಧಿಕ ಪರಿಸರ ಕಥನಗಳನ್ನು ಸಂಶೋಧನೆಗೊಳಪಡಿಸಿದ ಪ್ರಸ್ತುತ ನಿಬಂಧದ ವಸ್ತುವಿನ್ಯಾಸವನ್ನು ಹೀಗೆ ಪರಿಚಯಿಸಬಹುದು.

ಈ ನಿಬಂಧದ ಮೊದಲನೆಯ ಅಧ್ಯಾಯವು 'ಅಧ್ಯಯನ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶ'ವನ್ನು ನಿರ್ದಿಷ್ಟವಾಗಿ ತಿಳಿಸಿದೆ. ಇದರಲ್ಲಿ ಸಾಹಿತ್ಯ, ಕನ್ನಡ ಸಾಹಿತ್ಯ, ಕನ್ನಡ ಸಾಹಿತ್ಯ, ಆಧುನಿಕ ಕನ್ನಡ ಸಾಹಿತ್ಯ, ಸಾಹಿತ್ಯದಲ್ಲಿ ಪರಿಸರ ಸಂರಕ್ಷಣೆ, ಪರಿಸರದ ಮೇಲೆ

ನಡೆಯುತ್ತಿರುವ ದೌರ್ಜನ್ಯ ಇವುಗಳ ಸ್ಥೂಲ ನೋಟವಿದೆ. ಇವುಗಳ ಹಿನ್ನೆಲೆಯಲ್ಲಿ ಇಪ್ಪತ್ತನೆಯ ಶತಮಾನದಿಂದೀಚೆಗೆ ಪರಿಸರ ಸಂರಕ್ಷಣೆಯ ಜಾಗೃತಿ ಹೆಚ್ಚುತ್ತಿರುವುದನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ "ಕನ್ನಡ ಪರಿಸರ ಕಥನಗಳ ಇತಿಹಾಸ ಹಾಗೂ ಮಹತ್ವ"ವನ್ನು ಕುರಿತು ವಿಶ್ಲೇಷಿಸಲಾಗಿದೆ. ಇದರಲ್ಲಿ ಪ್ರಕೃತಿ ಕೇವಲ ಒಂದು ತೆರೆ ಎಂಬ ಭಾವನೆ ಸರಿದು ನಿಸರ್ಗಕ್ಕೂ ಮಾನವನಿಗೂ ಇರುವ ನಿಕಟ ಸಂಬಂಧದ ಅರಿವು, ಹಳೆಗನ್ನಡ, ನಡುಗನ್ನಡ, ಕಾವ್ಯಗಳಲ್ಲಿ ಪ್ರಕೃತಿ ವರ್ಣನೆ ಕೇವಲ ಅಷ್ಟಾದಶ ವರ್ಣನೆಗಳಲ್ಲಿ ಒಂದಾಗಿತು. ಅದರಲ್ಲಿ ಕವಿಯ ಕಲ್ಪನೆಯಿಂದ ಚಿತ್ರಿಸಿದ ಎಷ್ಟೋ ಚಿತ್ರಣಗಳನ್ನು ಕಾಣುತ್ತೇವೆ.

ನನ್ನ ಈ ಅಧ್ಯಯನದಲ್ಲಿ ಸಾಹಿತ್ಯದಲ್ಲಿ ಪ್ರಕೃತಿ ಎಂದರೇನು? ಎಂಬುದನ್ನು ತಿಳಿಸಿ ಅದನ್ನು ಗುರುತಿಸಿಕೊಳ್ಳುವ ಬಗೆಯನ್ನು ಪ್ರಕೃತಿ ಚಿತ್ರಣದ ದೃಷ್ಟಿಯನ್ನು ತಿಳಿಸುವುದರ ಜೊತೆಗೆ ಭಾರತೀಯ ಚಿಂತನೆಯ ಹಿನ್ನೆಲೆಯಲ್ಲಿ ಪ್ರಕೃತಿ ಹಳೆಗನ್ನಡ, ನಡುಗಣ್ಣಡ ಹಾಗೂ ಆಧುನಿಕ ಸಾಹಿತ್ಯದಲ್ಲಿ ಹೇಗೆ ನಿರೂಪಣೆಗೊಂಡಿದೆ ಎಂಬುದನ್ನು ಈ ಅಧ್ಯಾಯದಲ್ಲಿ ತಿಳಿಸಲು ಪ್ರಯತ್ನಿಸಿದ್ದೇನೆ.

ಮೂರನೆಯ ಅಧ್ಯಾಯದಲ್ಲಿ "ಪರಿಸರ ಕಥನಕಾರರ ಬದುಕು ಮತ್ತು ಸಾಧನೆಯ ಪರಿಚಯ"ದ ಶೀರ್ಷಿಕೆಯಲ್ಲಿ ಆಧುನಿಕ ಕನ್ನಡದ ಪರಿಸರ ಕಥನಕಾರರಾದ ಕುವೆಂಪು, ಬಿ.ಜಿ.ಎಲ್., ತೇಜಸ್ವಿ, ನಾಗೇಶ್ ಹೆಗಡೆ, ಚಂದ್ರಶೇಖರ ನಂಗಲಿ, ಟಿ.ಎಸ್.ವಿವೇಕಾನಂದ. ಜನನ, ಶಿಕ್ಷಣ, ಉದ್ಯೋಗ, ಕುಟುಂಬದ ವಿವರಗಳು ಸಾಹಿತ್ಯದ ಕೊಡುಗೆ ಪರಿಸರ ಕಥನ ಸಾಹಿತ್ಯದಲ್ಲಿ ಅವರ ಅಧ್ಯಯನ ಮತ್ತು ಸಾಧನೆ ಅವರಿಗೆ ಬಂದ ಪ್ರಶಸ್ತಿಗಳು ಅವರ ಕೃತಿಗಳನ್ನು ತಿಳಿಸಲಾಗಿದೆ.

ಸಂಶೋಧನಾ ನಿಬಂಧದ ಹೃದಯಭಾಗವಾದ ನಾಲ್ಕು ಮತ್ತು ಐದನೆಯ ಅಧ್ಯಾಯಗಳಲ್ಲಿ ಪರಿಸರ ಕಥನಗಳ ವಿಶ್ಲೇಷಣೆ ಮತ್ತು ಪರಿಸರ ಕಥನಗಳಲ್ಲಿನ ತಾತ್ತ್ವಿಕತೆಯ ತೌಲನಿಕ ನೋಟ, ಈ ಅಧ್ಯಯನ ಕುರಿತು ಆಳವಾಗಿ ಚರ್ಚಿಸಲಾಗಿದೆ.

ಪ್ರತಿಯೊಬ್ಬ ಮನುಷ್ಯನಲ್ಲೂ ಸಂಕುಚಿತ ಮನೋಭಾವ ಮನೆ ಮಾಡಿದ್ದು ಇವರ ಪರಿಸರ ಕಥನಗಳು ಈ ಸಂಕುಚಿತತೆಯನ್ನು ಕಳೆಯುವ ಹಾಗೂ ಕತ್ತಲನ್ನು ಹೋಗಲಾಡಿಸುವ 'ವಿಶ್ವಜ್ಞಾನದೀವಿಗೆ'ಗಳಾಗಿ ಕಾರ್ಯ ನಿರ್ವಹಿಸಿದೆ.

ಪರಿಸರ ಕಥನಗಳಲ್ಲಿ ಪ್ರಕೃತಿ ಮತ್ತು ಮಾನವ ಸಂಬಂಧ ಎಷ್ಟು ನಿಕಟವಾದದ್ದು. ಪ್ರಕೃತಿಯಿಂದ ಮಾನವ ಸಂಬಂಧವನ್ನು ಹೇಗೆ ವಿಭಿನ್ನಗೊಳಿಸಲು ಸಾಧ್ಯವಿಲ್ಲ ಎಂಬುದನ್ನು

ಇವೆರಡು ಒಂದೇ ನಾಣ್ಯದ ಎರಡು ಮುಖಗಳೆಂಬುದನ್ನು ಮರೆಯಲಾರದು. ಪ್ರಕೃತಿಯಿಂದ ಮಾನವನನ್ನು ಬೇರ್ಪಡಿಸುವುದೊಂದೇ. ನೀರಿನಿಂದ ಮೀನನ್ನು ಹೊರತೆಗೆದು ಹಾಕಿದಾಗ ಆಗುವ ಸ್ಥಿತಿಯೂ ಒಂದೇ. ಪರಿಸರ ಕಥನಕಾರರು ತಮ್ಮ ಕತೆ, ಕಾದಂಬರಿ, ನಾಟಕ ಮಹಾಕಾವ್ಯ ಮುಂತಾದವುಗಳಲ್ಲಿ ಹೇಗೆ ಈ ಪ್ರಕೃತಿ ಮತ್ತು ಮಾನವ ಸಂಬಂಧ ನಿಕಟವಾಗಿದೆ ಎಂಬುದನ್ನು ನಿರೂಪಿಸಿದ್ದಾರೆ ಎಂಬುದನ್ನು ಗುರುತಿಸಲು ಪ್ರಯತ್ನಿಸಿದ್ದೇನೆ.

ಕನ್ನಡ ಕಾವ್ಯ ಪ್ರಪಂಚದಲ್ಲಿ ನಿಸರ್ಗದ ವರ್ಣನೆ ಯಥೇಚ್ಛವಾಗಿರುವುದು ಕಂಡುಬರುತ್ತದೆ. ನಮ್ಮ ಕವಿಗಳು ಅಲೆಅಲೆಯಾಗಿ ಹೊಮ್ಮುವ ಪ್ರಕೃತಿ ಸೌಂದರ್ಯದ ಸಾಗರದಾಳಕ್ಕೆ ಮುಳುಗಿ ರಸಾನುಭವವನ್ನು ಪಡೆದಿದ್ದಾರೆ. ಪ್ರಕೃತಿಯ ಒಂದು ಮುಖ ಸುಕೋಮಲವೂ, ಲಲಿತ ಮೋಹಕವೂ, ಮಂಗಳಕರವೂ ಆದ ರಮಣೀಯ ಸೌಂದರ್ಯವಾಗಿದ್ದರೆ, ಇನ್ನೊಂದು ಮುಖ ಭಯಾನಕವೂ ಹಿಂಸಾತ್ಮಕವೂ, ವಿನಾಶಕವೂ ಆದ ಅಸಹನೀಯ ಕ್ರೌರ್ಯದ್ದು. ಪ್ರಕೃತಿಯ ಮೂಲಸ್ಥಿತಿ ಎಂದರೆ ಹಿಂಸೆ ಮತ್ತು ಪ್ರೀತಿ ಅಥವಾ ಆನಂದ ಮತ್ತು ದುಃಖವನ್ನು ಕೊಡುವುದು ಪ್ರಕೃತಿಯ ಸೌಂದರ್ಯಕ್ಕೂ ಸಹ ಈ ಮಾತು ಅನ್ವಯಿಸುತ್ತದೆ.

ಈ ಭೂಮಿಯ ಮೇಲೆ ಮಾತ್ರ ಜೀವ ಜಗತ್ತು ಅರಳಿದೆ. ಈ ಜಗತ್ತಿನ ಮೇರುಸ್ಥಾನದಲ್ಲಿ 'ಮಾನವ'ನಿದ್ದಾನೆ. ಈ ಮಾನವ ಎಷ್ಟೇ ಬುದ್ಧಿವಂತನಾಗಿದ್ದರೂ ಸ್ವಾರ್ಥಿ! ತಾನೊಬ್ಬನೇ ಈ ಭೂಮಿಯ ಮೇಲೆ ಇರಬೇಕೆಂಬ ಬಯಕೆ ಈತನದ್ದಾಗಿದೆ. ಈ ಕಾರಣಕ್ಕಾಗಿಯೇ ಇನ್ನಿತರ ಪ್ರಾಣಿಗಳಿಗೆ ಕುತ್ತು ತಂದಿದ್ದಾನೆ. ಅಭಿವೃದ್ಧಿಯ ಹೆಸರಿನಲ್ಲಿ ವನ್ಯಮೃಗಗಳ ತಾಣವಾದ ದಟ್ಟ ಅರಣ್ಯಗಳನ್ನೇ ನಾಶಮಾಡುತ್ತಿದ್ದಾನೆ. ಅವುಗಳನ್ನು ಬೇಟೆ ಆಡಿ ಅವುಗಳ ಸಂತತಿಗಳನ್ನೇ ವಿನಾಶದ ಕಡೆಗೆ ತಳ್ಳುತ್ತಿದ್ದಾನೆ. ಅದರ ಅಭ್ಯಾಸದಿಂದ ಇವುಗಳೊಳಗಿನ ಮಾನವನ ಸ್ವಭಾವಗಳು, ಚಲನವಲನಗಳು ಅವರ ಇನ್ನಿತರ ಸಂಸ್ಕೃತಿಗಳನ್ನು ವರ್ತಮಾನದ ನೆಲೆಯಲ್ಲಿ ಇಟ್ಟು ಈ ಮುಖ್ಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಕೊನೆಯ ಅಧ್ಯಾಯವು ಪರಿಸರ ಕಥನಗಳಲ್ಲಿನ ತಾತ್ತ್ವಿಕತೆಯ ತೌಲನಿಕ ಮೌಲ್ಯಮಾಪನ ಮಾಡುವ ಉದ್ದೇಶದಿಂದ ಕೂಡಿದ್ದಾಗಿದೆ. ಇದುವರೆಗೆ ಈ ನಿಟ್ಟಿನಲ್ಲಿ ನಡೆದಿರುವ ವ್ಯಾಪಕ ಅಧ್ಯಯನವನ್ನು ಬೆನ್ನಾಸರೆಗೆ ಇಟ್ಟುಕೊಂಡು ಈ ಭಾಗವನ್ನು ಹೆಚ್ಚು ಅಭ್ಯಾಸಪೂರ್ಣವಾಗುವಂತೆ ರೂಪಿಸಲಾಘಿದೆ. ಆರು ಉಪಶೀರ್ಷಿಕೆಯಲ್ಲಿ ಪರಿಸರ ಕಥನಕಾರರ ಪರಿಸರ ಪ್ಞ್ಞ ಮತ್ತು ಸಾಮಾಜಿಕ ಚಿಂತನೆಯ ಬಹುರೂಪಗಳನ್ನು ಒಂದಕ್ಕೊಂದು ಪರಸ್ಪರ ಹೋಲಿಸುತ್ತ ವಸ್ತುನಿಷ್ಠವಾಗಿ ಪರಿಶೀಲಿಸಲಾಗಿದೆ.

ಕೊನೆಯದಾಗಿ, ನಮ್ಮ ಇತ್ತೀಚೆಗಿನ ಪರಿಸರ ಬೆಳೆಯುತ್ತಿರುವ ನಗರೀಕರಣ, ಜಾಗತೀಕರಣ, ಖಾಸಗೀಕರಣ, ಯಾಂತ್ರೀಕರಣ, ಕಾಡಿನ, ನಾಶ, ಕೈಗಾರೀಕರಣ, ಬರಗಾಲ ಪ್ರವಾಹಗಳಿಂದ ದಿನದಿನಕ್ಕೂ ಕಲುಷಿತಗೊಳ್ಳುತ್ತಿದೆ. ಪ್ರತಿಯೊಂದು ಪ್ರಕೃತಿ ಜೀವಿಯೂ ಸಹ ವಿನಾಶದ ಅಂಚಿನತ್ತ ಸಾಗುತ್ತಿದೆ. ಈ ಸಂದರ್ಭದಲ್ಲಿ ಪರಿಸರ ಕಥನಕಾರರ ಪರಿಸರ ಕಥನಗಳನ್ನು ಅಧ್ಯಯನ ಮಾಡುವುದರಿಂದ ನಮ್ಮಲ್ಲಿ ಪರಿಸರ ಪ್ರಜ್ಞೆಯು ಮೂಡುತ್ತದೆ. ನಮ್ಮನ್ನು ಪ್ರಕೃತಿ ಮುಖಿಗಳನ್ನಾಗಿ ಮಾಡುತ್ತದೆ. ಪ್ರಕೃತಿ ಬಗೆಗಿನ ವಿಶೇಷವಾದ ಗೌರವವನ್ನು ತಾಳುವಂತೆ ಮಾಡುತ್ತದೆ. ನಮ್ಮನ್ನು ಪ್ರಕೃತಿ ಆರಾಧಕರಂತೆ ಮಾಡುತ್ತದೆ. ಪ್ರತಿಯೊಂದು ಪರಿಸರ ವಸ್ತುವಿಗೂ ಜೀವವಿದೆ. ದೈವಾಂಶವಿದೆ ಎಂಬುದನ್ನು ತಿಳಿಸುತ್ತದೆ. ಇಲ್ಲಿ ಅಧ್ಯಯನಕ್ಕೆ ಒಳಗಾಗಿರುವ ಪರಿಸರ ಕಥನಕಾರರು ಯಾವುದೇ ಆಡಂಬರ, ವೈಭವಕ್ಕೆ ಇಚ್ಛಿಸದೇ ವಾಸ್ತವವನ್ನು ತಮ್ಮ ಅನುಭವದ ಮೂಲಕ ವರ್ತಮಾನದ ನೆಲೆಯಲ್ಲಿ ಪ್ರತಿಪಾದಿಸುತ್ತ ತಮ್ಮ ಕಥನಗಳ ಮೂಲಕ ಭವಿಷ್ಯದ ಬದುಕಿಗೆ ಭದ್ರಬುನಾದಿಯನ್ನು ರೂಪಿಸುವ ಕೈದೀವಿಗೆಯಾಗಿದ್ದಾರೆ. ಅದನ್ನು ಪ್ರಸ್ತುತ ಸಮಾರೋಪದಲ್ಲಿ ಫಲಿತಗಳ ರೂಪದಲ್ಲಿ ಮಂಡಿಸಲಾಗಿದೆ.

*****

ಅನುಬಂಧ – ೧

## ಆಕರಗ್ರಂಥಗಳು

### ೧. ಪ್ರಧಾನ ಆಕರಗಳು

೧. ಕುವೆಂಪು – ಮಲೆನಾಡಿನ ಚಿತ್ರಗಳು
೨. ಬಿ.ಜಿ.ಎಲ್. ಸ್ವಾಮಿ – ಹಸುರು ಹೊನ್ನು
೩. ಕೆ.ಪಿ. ಪೂರ್ಣಚಂದ್ರತೇಜಸ್ವಿ – ಪರಿಸರದ ಕತೆ
೪. ನಾಗೇಶ್ ಹೆಗಡೆ – ಇರುವುದೊಂದೆ ಭೂಮಿ
೫. ಚಂದ್ರಶೇಖರ ನಂಗಲಿ – ಕಾಡು ಮತ್ತು ತೋಪು
೬. ಟಿ.ಎಸ್. ವಿವೇಕಾನಂದ – ಭೂಮಿಗೀತೆ

### ೨. ಪೂರಕ ಆಕರಗಳು

೧ ಕುವೆಂಪು : ಪಕ್ಷಿಕಾಶಿ
ಉದಯ ರವಿ ಪ್ರಕಾಶನ
ಮೈಸೂರು– ೧೯೯೪

ವಿಭೂತಿ ಪೂಜೆ
ಉದಯರವಿ ಪ್ರಕಾಶನ
ಮೈಸೂರು – ೧೯೭೦

ನವಿಲು
ಉದಯರವಿ ಪ್ರಕಾಶನ
ಮೈಸೂರು –೧೯೫೭

೨ ಬಿ.ಜಿ.ಎಲ್. ಸ್ವಾಮಿ : ಸಸ್ಯ ಪುರಾಣ
ನವಕರ್ನಾಟಕ ಪ್ರಕಾಶನ
ಬೆಂಗಳೂರು –೧೯೯೮

ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾ
ನವಕರ್ನಾಟಕ ಪ್ರಕಾಶನ
ಬೆಂಗಳೂರು – ೧೯೯೧.

ಶಾಸನಗಳಲ್ಲಿ ಗಿಡಮರಗಳು
ನವಕರ್ನಾಟಕ ಪ್ರಕಾಶನ
ಬೆಂಗಳೂರು – ೧೯೯೫

೩. ಕೆ.ಪಿ. ಪೂರ್ಣಚಂದ್ರತೇಜಸ್ವಿ : ವಿಸ್ಮಯ –೨
ಪುಸ್ತಕ ಪ್ರಕಾಶನ
ಮೈಸೂರು – ೧೯೯೩

ಚಿದಂಬರ ರಹಸ್ಯ
ಪುಸ್ತಕ ಪ್ರಕಾಶನ
ಮೈಸೂರು –೧೯೯೫

ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕಥೆಗಳು
ಪುಸ್ತಕ ಪ್ರಕಾಶನ
ಮೈಸೂರು – ೧೯೯೭

ಕರ್ವಾಲೋ
ಪುಸ್ತಕ ಪ್ರಕಾಶನ
ಮೈಸೂರು – ೧೯೯೫

೪. ಎಸ್.ವಿವೇಕಾನಂದ ತೇಜಸ್ವಿ ನಾಗೇಶ್ ಹೆಗಡೆ : ಕಿರಿಯರಿಗಾಗಿ ಪರಿಸರ
ಇಂದ್ರಪ್ರಸ್ಥ ಪ್ರಕಾಶನ – ೧೯೯೧

೫. ನಾಗೇಶ್ ಹೆಗಡೆ : ಪ್ರಜ್ಞೆನಗರ ನಿರ್ಮಾಣ, ಒರಿಯಂಟ್
ಲಾಂಗ್ ಮನ್ ಮದ್ರಾಸ್– ೧೯೯೩

ಮುಷ್ಟಿಯಲ್ಲಿ ಮಿಲೆನಿಯಮ್
ಅಂಕಿತ ಪುಸ್ತಕ
ಬೆಂಗಳೂರು –೨೦೧೧

ಪ್ರತಿದಿನ ಪರಿಸರ ದಿನ
ಅಂಕಿತ ಪುಸ್ತಕ
ಬೆಂಗಳೂರು –೨೦೦೧

ಮಣ್ಣು ಅದೇ ಅಸಲಿ ಹೊನ್ನು
ಭೂಮಿ ಬುಕ್ಸ್
ಬೆಂಗಳೂರು –೨೦೧೫

೬. ಚಂದ್ರಶೇಖರ ನಂಗಲಿ : ನಿರ್‌ಬೀಜೀಕರಣ ವಿರಾಟ್ ಸ್ವರೂಪ
ಲೋಹಿಯಾ ಪ್ರಕಾಶನ, ಬಳ್ಳಾರಿ –೧೯೯೯

ಕಾಡು ಮತ್ತು ತೋಪು
ಲೋಹಿಯಾ ಪ್ರಕಾಶನ, ಬಳ್ಳಾರಿ –೨೦೦೦

ನಾ ನಿಮ್ಮೊಳಗು
ಲೋಹಿಯಾ ಪ್ರಕಶಾನ
ಬಳ್ಳಾರಿ –೨೦೦೧

## ಅನುಬಂಧ – ೨

## ಪರಾಮರ್ಶನ ಗ್ರಂಥಗಳು


| | | | |
|---|---|---|---|
| ೧. | ಯು.ಆರ್.ಅನಂತಮೂರ್ತಿ | : | ಪ್ರಜ್ಞೆ ಮತ್ತು ಪರಿಸರ<br>ಕನ್ನಡ ಪುಸ್ತಕ ಪ್ರಾಧಿಕಾರ<br>ಬೆಂಗಳೂರು –೨೦೦೪ |
| ೨. | ದೇಜಗೌ | : | ರಾಷ್ಟ್ರಕವಿ ಕುವೆಂಪು<br>ಕನ್ನಡ ಪುಸ್ತಕ ಪ್ರಾಧಿಕಾರ<br>ಬೆಂಗಳೂರು –೧೯೮೬ (೩ನೇ ಮುದ್ರಣ) |
| ೩. | ಅರವಿಂದ ಮಾಲಗತ್ತಿ | : | ಮೂರನೆಯ ಕಣ್ಣು<br>ಶೈಲ ಪ್ರಕಾಶನ<br>ಮುದ್ದೇಬಿಹಾಳ್ – ೧೯೯೬ |
| ೪. | ಚಂದ್ರಶೇಖರ ತಾಳ್ಯ | : | ಸುಡುವ ಭೂಮಿ<br>ಯುವ ಹಿರಿಯ ವಿದ್ಯಾರ್ಥಿ ಸಂಘ<br>ನಿರಿಗೆರೆ –೧೯೯೪ |
| ೫ | ಜವರಯ್ಯ.ಮ.ನ | : | ಜಲ<br>ಸಿದ್ಧಾರ್ಥ ಗ್ರಂಥಮಾಲೆ<br>ಮೈಸೂರು–೧೯೯೮ |
| ೬ | ಶಿವಪ್ರಕಾಶ .ಹೆಚ್.ಎಸ್ | : | ಮಳೆ ಬಿದ್ದ ನೆಲದಲ್ಲಿ<br>ಕನ್ನಡ ಸಂಘ, ಕ್ರೈಸ್ಟ್‌ಕಾಲೇಜು<br>ಬೆಂಗಳೂರು, ೧೯೮೩. |
| ೭ | ನಟರಾಜ್ ಹುಳಿಯಾರ್ | : | ಗಾಳಿ ಬೆಳಕು<br>ಚಂದನ ಪ್ರಿಂಟರ್ ಅಂಡ್ ಪಬ್ಲಿಷರ್ಸ್<br>ಬೆಂಗಳೂರು –೨೦೦೨. |
| ೮ | ಸುಜನಾ | : | ಪರಂಪರೆ ಮತ್ತು ಕುವೆಂಪು<br>ಸಹ್ಯಾದ್ರಿ ಪ್ರಕಾಶನ<br>ಮೈಸೂರು–೧೯೮೪ |
| ೯ | ಶಂಪಾ ದೈ ತೋಟ | : | ಕಾರಂತರು ಮತ್ತು ಪರಿಸರ<br>ಕರ್ನಾಟಕ ಸಂಘ ಪುತ್ತೂರು<br>ದPಣ ಕನ್ನಡ –೧೯೯೪. |
| ೧೦ | ರಾಮಚಂದ್ರಗೌಡ ಹಿ.ಶಿ. | : | ಜಾನಪದ ಪ್ರಕೃತಿ<br>ಜ್ಞಾನೋದಯ ಪ್ರಕಾಶನ<br>ಬೆಂಗಳೂರು – ೨೦೦೧. |

೧೧ ನಾಗರಾಜ್.ಡಿ.ಆರ್ : ಶಕ್ತಿ-ಶಾರದೆಯ ಮೇಳ
ಅಕ್ಷರ ಪ್ರಕಾಶನ ಹೆಗ್ಗೋಡು
ಸಾಗರ- ೨೦೦೨

: ಸಾಹಿತ್ಯ ಕಥನ
ಅಕ್ಷರ ಪ್ರಕಾಶನ ಹೆಗ್ಗೋಡು
ಸಾಗರ -೧೯೯೬

೧೨ ಬೋರಲಿಂಗಯ್ಯ : ಗಿರಿಜನ ನಾಡಿಗೆ ಪಯಣ
ರಾಗಿರೊಟ್ಟಿ ಪ್ರಕಾಶನ
ಬೆಂಗಳೂರು-೧೯೯೧

: ಕಾಡು ಕಾಂಕ್ರೀಟ್ ಮತ್ತು ಜಾನಪದ
ಅಕ್ಷರ ಪ್ರಕಾಶನ
ಹೆಗ್ಗೋಡು – ೧೯೯೫.

೧೩ ಜಯಪ್ರಕಾಶ ಬಂಜಗೆರೆ : ಮಹೋವಾ
ಚರ ಪ್ರಕಾಶನ
ಹಾರೋಹಳ್ಳಿ- ೧೯೯೨.

೧೪ ನರಸಿಂಹಸ್ವಾಮಿ : ಮಲ್ಲಿಗೆ ಮಾಲೆ
ಲಿಪಿ ಪ್ರಕಾಶನ
ಬೆಂಗಳೂರು – ೧೯೮೬

೧೫ ಲಿಂಗಯ್ಯ.ಡಿ : ಜಾನಪದ ಪ್ರಾಣಿ ಕಥೆಗಳು
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು -೧೯೮೦.

೧೬ ಶಿವರಾಮ ಕಾರಂತ.ಕೆ : ಬೆಟ್ಟದ ಜೀವ
ಎಸ್.ಬಿ.ಎಸ್.ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್
ಬೆಂಗಳೂರು -೧೯೯೮.

೧೭ ಶ್ರೀಧರ್.ಎಂ.ಕೆ : ಚಾರಣ ಪರಿಸರ
ತೇಜಸ್ವಿನೀ ಪ್ರಕಾಶನ
ಬೆಂಗಳೂರು -೧೯೯೪.

೧೮ ಪ್ರೊ. ಭೈರಪ್ಪ.ಕೆ : ಪರಿಸರ ಸಂರಕ್ಷಣೆ
ಸಪ್ನ ಬುಕ್ ಹೌಸ್
ಬೆಂಗಳೂರು

೧೯ ಕುಂ.ವೀರಭದ್ರಪ್ಪ : ಭಗವತಿ ಕಾಡು
ಕಲ್ಯಾಣ ಪ್ರಕಾಶನ
ಬೆಂಗಳೂರು -೧೯೯೦

೨೦ ವೆಂಕಟಸುಬ್ಬಯ್ಯ.ಜಿ : ನಿಸರ್ಗದ ಮಡಿಲು
ಗೌತಮ ಪ್ರಕಾಶನ
ಮೈಸೂರು – ೧೯೭೬ (೨ನೇ ಮುದ್ರಣ)

೨೧ ಶ್ರೀನಿವಾಸ : ಕಾಕನ ಕೋಟೆ
ಜೀವನ ಕಾರ್ಯಾಲಯ ಪ್ರಕಾಶನ
ಬೆಂಗಳೂರು – ೧೯೮೮.

೨೨ ಕಾಳೇಗೌಡ ನಾಗವಾರ : ಸೃಜನಶೀಲ ವೈಚಾರಿಕತೆ
ಸಪ್ನ ಬುಕ್ ಹೌಸ್
ಬೆಂಗಳೂರು – ೨೦೦೦

೨೩ ಬೆಸೂರು ಮೋಹನ್ ಪಾಳೇಗಾರ್ : ಮಾನವ ಮತ್ತು ಪರಿಸರ ಜಾಗೃತಿ
ವಿಜಯಲಕ್ಷ್ಮಿ ಪ್ರಕಾಶನ
ಮೈಸೂರು – ೨೦೧೩

೨೪ ಪ್ರೇಮಾಭಟ್ : ಕಾಡು ಕಡಿದು ಊರು ಮಾಡಿದರು
ಪ್ರೇಮ ಸಾಯಿ ಪ್ರಕಾಶನ
ಬೆಂಗಳೂರು – ೧೯೯೨

೨೫ ಡಾ.ಕೆ.ಶಿವರಾಮ ಕಾರಂತ : ಬೆಟ್ಟದ ಜೀವ
ದೀಪಕ್ ಪಬ್ಲಿಷರ್ಸ್
ಬೆಂಗಳೂರು – ೨೦೧೪.

**ಅನುಬಂಧ – ೩**

## ಲೇಖನಗಳು

೧. ಅಮೀರ್ ಅಹ್ಮದ್ ಟಿ.ಎಂ. ನಮ್ಮ ಪರಿಸರ, ಪ್ರಕಾಶಕರು, ಶ್ರೀಮತಿ ಎಸ್. ಎಂ. ಫೆಹಮಿದಾಬೇಗಮ್, ಬೆಂಗಳೂರು – ೧೯೯೯.

೨. ಆನಂದರಾಮ ಎಸ್. ಸಸ್ಯಗಳ ಪರಿಸರ ವಿಜ್ಞಾನ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು – ೧೯೮೮.

೩. ಉಲ್ಲಾಸ ಕಾರಂತ.ಕೆ, ಅರಣ್ಯ ಮತ್ತು ಸಮಾಜ ಅಕ್ಷರ ಪ್ರಕಾಶನ ಹೆಗ್ಗೋಡು–೧೯೮೫.

೪. ಉಲ್ಲಾಸ ಕಾರಂತ.ಕೆ. ಕಾಡು ಪ್ರಾಣಿಗಳ ಜಾಡಿನಲ್ಲಿ, ಅತ್ರಿ ಬುಕ್ ಸೆಂಟರ್, ಮಂಗಳೂರು – ೨೦೦೧.

೫. ಕೃಷ್ಣ ಆನಂದ ಕಾಮತ್, ಪ್ರಾಣಿ ಪರಿಸರ, ಮನೋಹರ ಗ್ರಂಥಮಾಲೆ, ಧಾರಾವಾಡ – ೧೯೭೫.

೬. ಚಂದ್ರ ಪೂಜಾರಿ.ಎಂ. ಪರಿಸರ ಮತ್ತು ಅಭಿವೃದ್ಧಿ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೧೯೯೮.

೭. ಘನಶ್ಯಾಮ್.ಕೆ.ವಿ. ಕಡಲಿನ ಒಡಲು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು–೧೯೯೬.

೮. ಚಂದ್ರ ಮೂರೂರು, ಪ್ರಪಂಚ ಪರಿಸರ, ಮಧುಚಂದ್ರಪ್ರಕಾಶ, ಮಂಗಳೂರು, ೧೯೭೦.

೯. ನಾಗಭೂಷಣರಾವ್ ಸಿಂಧೆ, ಜೀವ ಜೀವನ, ಮೈತ್ರಿ ಪ್ರಕಾಶನ, ಮೈಸೂರು ವಿಶ್ವವಿದ್ಯಾನಿಲಯ, ೧೯೪೫.

೧೦. ನಾರಾಯಣರಾವ್.ಎ. ಪ್ರಾಣಿಜೀವನ, ಮೈಸೂರು ವಿಶ್ವವಿದ್ಯಾನಿಲಯ–೧೯೪೫.

೧೧. ಶಿವರಾಮ ಕಾರಂತ.ಕೆ. ಪರಿಸರ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ – ೧೯೯೫.

೧೨. ಶೇಷಗಿರಿರಾವ್.ಡಿ. ಸಸ್ಯಸಂರಕ್ಷಣೆ ಕೈಪಿಡಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು–೧೯೭೧.

೧೩. ಜಯದೇವ.ಜಿ.ಎಸ್. ಪರಿಸರದ ಸ್ವರೂಪ, ಇಂದ್ರಪ್ರಸ್ಥ ಪ್ರಕಾಶನ, ಬೆಂಗಳೂರು – ೧೯೯೫.

೧೪. ಪುಟ್ಟಸ್ವಾಮಿ.ಕೆ. ಕೃಪಾಕರ ಸೇನಾನಿ, ಜೀವಜಾಲ, ಹಸುರು ಪ್ರಕಾಶನ, ಬೆಂಗಳೂರು – ೧೯೯೯.

೧೫. ಚಂದ್ರಶೇಖರ ನಂಗಲಿ, ಆಧುನಿಕ ಮಾಹಿತಿ ತಂತ್ರಜ್ಞಾನ ಮತ್ತು ವಿಶ್ವಮಾನವ ಕಲ್ಪನೆ, ಕಾಡು ಮತ್ತು ತೋಪು, ೨೦೦೦.

**ಇಂಗ್ಲಿಷ್ ಪುಸ್ತಕಗಳು/ಲೇಖನಗಳು**

1. Ruth more the Earth we Live on. Jonathan cape thirty Bedford-square London -1957
2. Anil Kumar De. Environmental Chemistry wiley Eastern Limited – New Delhi -1987.
3. Richard Carrington: the story of our Earth. Happer and Brtohers publishers, New Yeark- 1956.
4. Sharma.P.D: Ecology and Environment, Rastogi publications India – 1994.
5. Carey Eroneis William .C krumbeia, Down to Earth. University of Chicago press, Chicago and London – 1963.

**ಜಾಲತಾಣಗಳು (Websites)**

1. Gttpill.www. org/c.p.i. Environmented program. Efm
2. www.kanaja, in

## ಅನುಬಂಧ-೪

### ಸಂಶೋಧನ ಪ್ರಬಂಧಗಳು

೧. ಸುವರ್ಣಲತಾ, ಕುವೆಂಪು ಕಾದಂಬರಿಗಳಲ್ಲಿ ಪ್ರಕೃತಿ ಒಂದು ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಪಿಎಚ್.ಡಿ ಪ್ರಬಂಧ-೧೯೯೯.

೨. ಬಿ.ಸಿ.ಕುಶಾಲ, ಆಧುನಿಕ ಕನ್ನಡ ಸಾಹಿತ್ಯ: ಪರಿಸರ ಪ್ರಜ್ಞೆ ಮತ್ತು ಜೀವನ ದರ್ಶನ ಎಂ.ಫಿಲ್, ಪ್ರಬಂಧ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ-೧೯೯೬.

೩. ಸುಮಿತ್ರಾ ಎಲ್.ಪಿ.: ಕುವೆಂಪು ಮತ್ತು ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಪ್ರಕೃತಿ ಕುವೆಂಪು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ-೨೦೦೨.

೪. ಡಾ. ಗಣೇಶ, ಕುವೆಂಪು ಹಾಗೂ ಕಾರಂತರ ಕಥಾಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ ; ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ, ೨೦೧೨.

## ಅನುಬಂಧ-೫

### ಅನುವಾದಿತ ಕೃತಿಗಳು

೧. ನಾಗೇಗೌಡ.ಎಚ್.ಎಸ್. ಗಿರಿಜನ ಪ್ರಪಂಚ, ಸಾಹಿತ್ಯ ಸದನ ಪ್ರಕಾಶನ, ಬೆಂಗಳೂರು-೧೯೭೪

೨. ನಾಗೇಶ್ ಹೆಗಡೆ, ಪರಿಸರ ಪ್ರಜ್ಞೆ ನಗರ ನಿರ್ಮಾಣ, ಓರಿಯಂಟ್ ಲಾಂಗ್‌ಮನ್, ಮದ್ರಾಸ್-೧೯೯೩.

೩. ರಾಜಶೇಖರ.ಜಿ. ಪರಿಸರ ರಕ್ಷಣೆ ಮತ್ತು ಸಮಾಜವಾದ, ಅಕ್ಷರ ಪ್ರಕಾಶನ, ಸಾಗರ, ೧೯೮೪.

೪. ಗಣೇಶ್ ಶಣೈ ಮುನಿಯಲ್, ಮರುಭೂಮಿ ಕಾಡಾಯಿತು, ದಿಗಂತ ಸಆಹಿತ್ಯ, ಮಂಗಳೂರು-೧೯೭೭.

೫. ಶಿವಪ್ಪ.ಡಿ.ಎಸ್.ಜೀವಂತಭೂಮಿ, ಗೀತಾ ಬುಕ್ ಹೌಸ್, ಮೈಸೂರು-೧೯೬೯.

## ಅನುಬಂಧ – ೬

### ಛಾಯಾಚಿತ್ರಗಳು



ಕೆ.ಪಿ. ಪೂರ್ಣಚಂದ್ರ ತೇಜಸ್ವಿ



ನಾಗೇಶ್ ಹೆಗಡೆ

